Photo by P. R. Shinde



ಬಹುಮಾನ
ಪಡೆದ ಶೀರ್ಷಿಕೆ

ಸಹಜವಿದೇ ಚೆಂದ

ಕಳಿಸಿದವರು:
ಶ್ರೀಮತಿ ಯಶೋದಾ



ಬರುತ್ತದೆ....
ವಾಹಿನಿ ಯವರ
ಬಂಗಾರು ಪಾಪ
S.V.ರಂಗರಾವ್. • ಜಗ್ಗಯ್ಯ • ರಾಮಶರ್ಮ •
ಕೃಷ್ಣಕುಮಾರಿ • ಜಮುನ ನಟಿಸಿರುವರು •
ನಿರ್ಮಾಪಕ • ದಿಗ್ದರ್ಶಕ ಬಿ.ಯನ್. ರೆಡ್ಡಿ

ಫೌಂಟೆನ್ ಪೆನ್ ಮತ್ತು
ಶಾಯಿಯ ಬಾಬ್ತು
ವಿಶ್ವವಿಖ್ಯಾತವಾದ
ಹೆಸರು

## ಪೈಲಟ್

ಈಗ ಪುನಃ
ಇಂಡಿಯಾ ಪೂರಾ
ಎಲ್ಲೆಲ್ಲೂ
ದೊರಕುತ್ತದೆ

★

ಗ್ಯಾರಂಟೀ
ದರ್ಜೆ

MANUFACTURED BY
THE PILOT PEN CO. (INDIA) LTD.
CATHOLIC CENTRE, MADRAS-1.



## ಡೋಂಗರೇ ಬಾಲಾಮೃತ

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.

## ಗ್ರೈಪ್ ಸಿರಪ್ - ಐ. ಟಿ. ಎಲ್.

ನಿಮ್ಮ ಮುದ್ದು ಕಂದನ ಅಜೀರ್ಣ ವ್ಯಾಧಿಗಳನ್ನು
ತಡೆದು ಆರೋಗ್ಯ ಕಾಪಾಡುವ ಅಮೃತಪಾನ.

ತಯಾರಕರು:

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್
ಟೆಸ್ಟಿಂಗ್ ಲ್ಯಾಬೋರಟರಿ, ಲಿ.,**
ಮಲ್ಲೇಶ್ವರಂ :: ಬೆಂಗಳೂರು-3

ಎಲ್ಲಾ ಪ್ರಮುಖ ವ್ಯಾಪಾರಿಗಳಲ್ಲೂ
ದೊರೆಯುತ್ತದೆ



ವ್ಯಾಪಾರದ ಗುರುತು  **ಗ್ರೈಪ್ ಸಿರಪ್**

ಮೈಸೂರು ಪ್ರಾಂತದೊಳಗೆಲ್ಲಾ
ಪ್ರದರ್ಶಿಸಲ್ಪಡುತ್ತಿರುವ
ಅದ್ಭುತ ಶೃಂಗಾರ ಚಿತ್ರ

*

ಕುಟುಂಬ ಸಮೇತರಾಗಿ ಬರುವ
ಪ್ರೇಕ್ಷಕರಿಗೆ ಹಾಸ್ಯರಸವು ತುಂಬಿದ
ಒಂದು ಅಪೂರ್ವ ಔತಣ



ವಿಜಯ ರವರ

# ಮಿಸ್ಸಮ್ಮ

ನಿರ್ದೇಶನ..... ಪ್ರಸಾದ್
ನಿರ್ಮಾಪಕರು... ನಾಗಿರೆಡ್ಡಿ & ಚಕ್ರಪಾಣಿ



# ಬಹುಮಾನ ಪಡೆಯಿರಿ!

## ತಪ್ಪುಗಳನ್ನು ಕಂಡುಹಿಡಿಯಿರಿ

### ತಪ್ಪು ಎಲ್ಲಿದೆ ಗೊತ್ತೆ?

ಮುದ್ರಣ ಕಲೆಯನ್ನು ಕಲಿಯುತ್ತಿರುವ ಗೋವಿಂದನೆಂಬ ಹುಡುಗ ಬಹಳ ಕಷ್ಟಕ್ಕೀಡಾಗಿದ್ದಾನೆ. ಅವಸರವಾಗಿ ಬೇಕೆಂದು ಹೇಳಿದ ಪ್ರಯುಕ್ತ ಅವನು ಬೇಗ ಮುದ್ರಿ ಕೊಟ್ಟ "ಬಿನಾಕಾ" ಪೆಟ್ಟಿ ಮೇನೇಜರಿಗೆ ಬಹಳ ಸಿಟ್ಟನ್ನುಂಟು ಮಾಡಿದೆ. ಗೋವಿಂದನು ಬಹಳ ತಪ್ಪುಗಳನ್ನು ಮಾಡಿದ್ದಾನೆ.

ನೀವು ಗೋವಿಂದನಿಗೆ ಅವನ ತಪ್ಪುಗಳನ್ನು ತೋರಿ ಕೊಡಬಲ್ಲಿರಾ?

ಈ ಕೆಳಗೆ ತೋರಿಸಿರುವಂತೆ ಗೋವಿಂದನ ಕೆಲಸ ನಮೂನೆಯಲ್ಲಿ ಒಂದೊಂದು ತಪ್ಪಿನಮೇಲೂ ಒಂದೊಂದು ವರ್ತುಳವನ್ನು ಹಾಕಿ.



'TO͡OTHPASTE' 'GRE(A)N'

ಎಷ್ಟು ತಪ್ಪುಗಳಿವೆಯೋ ಆ ಅಂಕಿಯನ್ನು ಎಂಟ್ರಿಫಾರಂಮೇಲೆ ಬರೆಯಿರಿ. ಆಕೃತಿಯಲ್ಲಾಗಲೀ ಬಣ್ಣದಲ್ಲಾಗಲೀ ತಪ್ಪುಗಳಿದ್ದರೆ ತಿದ್ದಬೇಕಾಗಿಲ್ಲ.

### ಬಹುಮಾನದ ವಿವರಗಳು:

1ನೇ ಬಹುಮಾನ: *690* ರೂ. ಬೆಲೆ ಬಾಳುವ ಒಮಿಗಾ–ಕಾನ್ಸ್ಟಲೇಷನ್ ಕೈಗಡಿಯಾರ. (ಆಲ್‌ಪ್ರೂಫ್ ಸೆಲ್ಫ್‌ವೈಂಡಿಂಗ್ ಕ್ರೋನೋಮೀಟರ್)

2ನೇ ಬಹುಮಾನ: *500* ರೂ. ಬೆಲೆಬಾಳುವ ಒಮಿಗಾ–ಸೀಮಾಸ್ಟರ್–ಕ್ಯಾಲೆಂಡರ್ ಕೈಗಡಿಯಾರ. (ಸೆಲ್ಫ್‌ವೈಂಡಿಂಗ್, ಡೇಟು ಸಹ ತೋರಿಸುತ್ತದೆ)

3ನೇ ಬಹುಮಾನ: *450* ರೂ. ಬೆಲೆ ಬಾಳುವ ಒಮಿಗಾ–ಸೀಮಾಸ್ಟರ್ ಎಂಬ ಸೂಪರ್ ವಾಟರ್‌ಟೈಟ್ ಸೆಲ್ಫ್‌ವೈಂಡಿಂಗ್ ಕೈಗಡಿಯಾರ. *30,000* ವಿಮಾನ ಸಂಚಾಲಕರು ಉಪಯೋಗಿಸುತ್ತಿರುವ ಆಕ್ಯುರೇಟ್ ಟೈಂ ತೋರಿಸತಕ್ಕದ್ದು.

ತರುವಾಯ **12** ಬಹುಮಾನಗಳು: ಆಗ್ಫಾಕ್ಲಾಕ್ ಕ್ಯಾಮೆರಾ *29* ರೂ. ಬೆಲೆಯುಳ್ಳದ್ದು.

ತರುವಾಯ **12** ಬಹುಮಾನಗಳು: ಬಾಡ್‌ಮಿಂಟನ್ನು ಬ್ಯಾಟು ಅಥವಾ ಹಾಕಿ ಸ್ಟಿಕ್ಕು (*10* ರೂ, ಬೆಲೆ ಉಳ್ಳದ್ದು)

ತರುವಾಯ **12** ಬಹುಮಾನಗಳು: ಪೆಯಿಂಟ್ ಬಾಕ್ಸುಗಳು (ಬ್ರಷ್ಷುಸಹ) (ರೂ. *7/8-* ಬೆಲೆ ಉಳ್ಳದ್ದು)

ತರುವಾಯ **500** ಬಹುಮಾನಗಳು: "ಫೋಲಿಟಿಯ್ನರ್" ಕ್ಯಾಂಪಿಂಗ್ ವಾಟರ್ ಬಾಟಲ್‌ಗಳು. (*5* ರೂ. ಬೆಲೆ ಉಳ್ಳದ್ದು)

ತರುವಾಯ **5000** ಬಹುಮಾನಗಳು: "ದಿ ಟ್ರೆಷರ್ ಹಂಟ್" ಎಂಬ ನವೀನ ಆಟಕ್ಕೆ ಬೇಕಾದ ಸಾಮಗ್ರಿಗಳು. ಮತ್ತು ಎಲ್ಲಾ ಸ್ಪರ್ಧಿಗಳಿಗೂ *1955*ನೇ ಬಿನಾಕಾ ಸ್ಕೂಲ್ ಟೈಂಟೇಬಲ್.



ಬಟ್ಟೆಗಳ ಬಾಳ್ವಿಕೆಗೆ
ಮತ್ತು ಶುಭ್ರತೆಗೆ

# ಕಸ್ತೂರಿ

ಬಾರ್ ಸೋಪು

★

ತಯಾರಕರು
ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್
ತುಮಕೂರು

ಹೆಡ್ ಆಫೀಸ್ : ಮಂಗಳೂರು.

## "ಚಂದಮಾಮ"ನಿಗೆ
## ಏಜಂಟರು ಬೇಕು

•

ಏಜಂಟರಿಲ್ಲದ ಕಡೆಗಳಲ್ಲಿ ಸಣ್ಣ ಸಣ್ಣ ಏಜಂಟರು ಬೇಕು. ನೀವು ಎಜಂಟರಾಗಿ ಸ್ವಲ್ಪ ಪ್ರತಿಗಳನ್ನು ಕೂಡಾ ತರಿಸಿಕೊಳ್ಳಬಹುದು. ಪ್ರತಿ ತಿಂಗಳೂ **2-0-0** ಕಳುಹಿಸುತ್ತಾ ಇದ್ದರೆ ನಿಮಗೆ **7** ಪ್ರತಿಗಳನ್ನು ಕಳುಹಿಸುತ್ತೇವೆ. ಈ ಪದ್ಧತಿಯಿಂದ ನಿಮಗೆ ಪತಿ ತಿಂಗಳೂ 0-10-0 ಲಾಭವಿರುತ್ತದೆ. ಪೂರ್ಣ ವಿವರಗಳಿಗೆ ಬರೆಯಿರಿ.

ಚಂದಮಾಮ ಪಬ್ಲಿಕೇಷನ್ಸ್
ವಡಪಳನಿ : ಮದ್ರಾಸು - 26



## ಹೋಂ ಸಿನಿಮಾ ಪ್ರೊಜೆಕ್ಟರ್

ಈ ಪೋರ್ಟೆಬಲ್ ಪ್ರೊಜೆಕ್ಟರ್‌ನಿಂದ ನೀವು ನಿಮ್ಮ ಮನೆಯೊಳಗಿದ್ದೇ ನಿಜವಾದ ಸಿನಿಮಾದಿಂದ ಉಂಟಾಗುವ ಆನಂದವನ್ನು ಪಡೆಯಬಹುದು. ಇದನ್ನು ಟಾರ್ಚಿನಿಂದಾಗಲಿ, ಎಲೆಕ್ಟ್ರಿಸಿಟಿ (ಎ ಸಿ ಅಥವಾ ಡಿ ಸಿ) ಯಿಂದಾಗಲಿ, 35 ಮಿ.ಲ್ಲಿಮಿಟರ್ ಫಿಲಿಮನ್ನು ಉಪಯೋಗಿಸಿ ನಡೆಸಬಹುದು. (4' × 4') ಪೂರ್ತಿಸೈಜಿನಲ್ಲಿ ರಂಗುಗಳಿಂದಕೂಡಾ ಒಮ್ಮೆಗೇ ಚಿತ್ರ ಚಲಿಸುವುದೂ ನಟಿಸುವುದೂ ಕಾಣಿಸುತ್ತದೆ 5 ಗಜ ಫಿಲಿಮ್‌ರೀಲನ್ನೂ, ಉಪಯೋಗಿಸುವ ವಿಧಾನವನ್ನು ತಿಳಿಸುವ ಚಿತ್ರದ ಪುಸ್ತಕವನ್ನೂ ಉಚಿತವಾಗಿ ಕೊಡಲಾಗುತ್ತದೆ. ಬೆಲೆ ರೂ. 12-8-0. ವಿ. ಪಿ. ಪಿ. ಚಾರ್ಜು ರೂ. 3/-. ಪ್ರತ್ಯೇಕ ಫಿಲಿಮ್‌ರೀಲು ಗಜ ಒಂದಕ್ಕೆ ಆಣೆ 0-8-0. ಸ್ಪೆಶಲ್ ಸ್ಕ್ರೀನ್ ರೂ. 3/-.

ಪತ್ರವ್ಯವಹಾರವನ್ನು ಇಂಗ್ಲೀಷಿನಲ್ಲಿಯೇ ಮಾಡಬೇಕು.

**BHARTENDU - BHAVAN (5)**
**P. O. HATHRAS City (India)**

# ಚಂದಮಾಮ



ಕನ್ನಡ ಭಾಷೆಯಲ್ಲಿ ಮಾತ್ರವಲ್ಲದೆ ನಮ್ಮ ಭಾರತದೇಶದ ಮತ್ತೂ ಆರು ಪ್ರಮುಖ ಭಾಷೆಗಳಲ್ಲಿ ಅಂದರೆ, ಹಿಂದೀ, ಮರಾಠೀ, ಗುಜರಾತೀ, ತೆಲುಗು, ತಮಿಳು ಮತ್ತು ಮಲೆಯಾಳಂ ಭಾಷೆಗಳಲ್ಲಿ ಪ್ರತಿ ತಿಂಗಳೂ ಪ್ರಕಟವಾಗುತ್ತದೆ.

ಈ ವಿವಿಧಭಾಷಾ ಪ್ರಕಟಣೆಗಳಲ್ಲಿ ಜಾಹಿರಾತು ಕೊಡುವುದರ ಮೂಲ್ಕ ನಿಮ್ಮ ವ್ಯಾಪಾರವನ್ನು ಭಾರತಾದ್ಯಂತ 1,65,000 ಅನುಕೂಲಸ್ಥರಾದ ಓದುಗರ ಆದರಣೆಯ ಮುಖೇನ ವಿಸ್ತರಿಸಿಕೊಳ್ಳಬಹುದು.




ವಿವರಗಳಿಗೆ :

ಚಂದಮಾಮ ಪಬ್ಲಿಕೇಷನ್ಸ್,

(ಅಡ್ವರ್ಟೈಸ್‌ಮೆಂಟ್ ಡಿಪಾರ್ಟ್‌ಮೆಂಟ್)

ಚಂದಮಾಮ ಬಿಲ್ಡಿಂಗ್ಸ್ :: ಮದರಾಸು-26

ಫೋನ್ : 88474 — ತಂತಿ : CHANDAMAMA

# ಇಷ್ಟೆಲ್ಲಾ ಬರೇ ಕೆಮ್ಮಿನಿಂದ ಪ್ರಾರಂಭವಾಯಿತು...

ಪ್ರಥಮವಾಗಿ ತಂದೆಯವರಿಗೆ ಕೆಮ್ಮು ತಗಲಿ ಮನೆಗೆ ಬಂದಿದ್ದರೂ ... ಆ ಮತ್ತೆ ತಾಯಿಗೂ ಕೆಮ್ಮು ತಗಲಿತು, ಸ್ವಲ್ಪಸಮಯದೊಳಗೆ ಮನೆಯಲ್ಲಿದ್ದ ಎಲ್ಲಾ ಮಕ್ಕಳಿಗೂ ಕೆಮ್ಮು ತಗಲಿ, ಎಲ್ಲರೂ ಕೆಮ್ಮುತಾ... ಕೆಮ್ಮುತ್ತಾ...ಕೆಮ್ಮುತ್ತಾ, ಬಳಲಿ ಬೆಂದು ಬೇಸತ್ತರು. ಜಾಗ್ರತೆ, ನಿಮ್ಮ ಮನೆಯಲ್ಲಿಯೂ ಈ ರೀತಿಯ ಅವಸ್ಥೆ ಬಾರದಂತೆ ತಡೆಯಿರಿ. ಪರ್ಟುಸಿನ್ ಟೆಷ್ನರ್ 60 ಕ್ಕಿಂತಲೂ ಹೆಚ್ಚು ವರ್ಷಗಳಿಗಿಂತ ಇಂತಹ ವ್ಯಾಧಿಗಳಿಗೆ ಅತಿ ಪರಿಣಾಮಕಾರಿಯಾದ ಔಷಧಿಯೆಂದು ಪರಿಗಣಿಸಲ್ಪಟ್ಟಿರುತ್ತದೆ. ಇದು ಎಲ್ಲಾ ತರದ ಕೆಮ್ಮುಗಳನ್ನೂ, ಅಲ್ಲದೆ ನಾಯಿಕೆಮ್ಮನ್ನೂ ಕೂಡಾ ಶೀಘ್ರವಾಗಿಯೂ ಸುರಕ್ಷಿತವಾಗಿಯೂ ಪರಿಹರಿಸುತ್ತದೆ.




ಇಂದೇ

## ಪರ್ಟುಸಿನ್

"ಟೆಷ್ನರ್" ಪಡೆಯಿರಿ.

ಎಲ್ಲಾ ಕೆಮಿಸ್ಟ್ ಅಂಗಡಿಗಳಲ್ಲಿಯೂ ದೊರೆಯುವುದು.

ಇಟಿಫಾ ಲಿಮಿಟೆಡ್, ಷಾನ್, ಲೀಶಿನ್‌ಸ್ಟೀನ್, ಸ್ವಿಸ್ ಕಸ್ಟಮ್ ಮತ್ತು ಎಕನಾಮಿಕ್ ಟೆರಿಟೊರಿ, ಇವರ ಏರ್ಪಾಡಿನಿಂದ **ಇರ್ಫಾ ಲಿಮಿಟೆಡ್,**
ಪೋಸ್ಟ್ ಬಾಕ್ಸ್ 1041, ಮುಂಬಯಿ-1 ಇವರು ಭಾರತದಲ್ಲಿ ತಯಾರಿಸುತ್ತಿರುವರು.

ILY - 10 - KAN



ಮಗುವಿಗೆ

ಇವು

ಬಲು ಇಷ್ಟ

ಜೆ. ಬಿ. ಮಂಘಾರಾಮ್ ರವರ

# NOURISHING

ನರಿಷಿಂಗ್ ಬಿಸ್ಕಟ್ಟುಗಳು




ಮಗುವಿಗೆ ಹಲ್ಲು ಬರುವಾಗ
ನರಿಷಿಂಗ್ ಬಿಸ್ಕಟ್ಟುಗಳನ್ನು
ಕೊಡಿರಿ. ಆ ಕಟಕಟವನ್ನೂ
ಆ ರುಚಿಯನ್ನೂ ನೋಡಿದರೆ
ಮಗು ಬಹು ಇಷ್ಟಪಡುತ್ತದೆ.
ಮೇಲಾಗಿ ಈ ಬಿಸ್ಕಟ್ಟುಗಳು ಆರೋಗ್ಯ
ಕೊಡುವ ವಿಟಮಿನ್ನುಗಳಿಂದ ತುಂಬಿವೆ.

ಉತ್ತಮ ದರ್ಜೆಯವು: ಅಮೂಲ್ಯ ವಿಟಮಿನ್ನುಗಳು.

ಜೆ. ಬಿ. ಮಂಘಾರಾಮ್ ಅಂಡ್ ಕೋ., ಗ್ವಾಲಿಯರ್

ಬ್ರಾಂಚ್: 35/37, ತಂಬುಚೆಟ್ಟಿ ಬೀದಿ, ಜಿ. ಟಿ. ಮದ್ರಾಸು.

MI



## ಈ ಸಂಚಿಕೆಯಲ್ಲಿ



ಅಲ್ಲದೆ ಮಾಯಾಚಕ್ರ, ಫೋಟೋ ಶೀರ್ಷಿಕೆಯ ಸ್ಪರ್ಧೆ,
ವಾರ್ತೆಗಳು — ವಿಶೇಷಗಳು, ಚಿತ್ರಕಥೆ ಕೂಡಾ ಇವೆ.

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

ಪ್ರಪಂಚದಲ್ಲಿ ಎಲ್ಲವೂ ಒಳ್ಳೆಯದೇ ಆಗಿರುವುದಿಲ್ಲ; ಒಳ್ಳೆಯದೂ ಕೆಟ್ಟದೂ ಎರಡೂ ಕಲಬೆರಕೆಯಾಗಿಯೇ ಇರುತ್ತದೆ. ದವಸ ಧಾನ್ಯಗಳನ್ನು ತಂದು ಹಸನು ಮಾಡಿಕೊಂಡು ಉಪಯೋಗಿಸುವಂತೆ, ನಾವು ಈ ಪ್ರಪಂಚದಲ್ಲಿ ಸಂತೋಷದಿಂದ ಬಾಳಬೇಕು. ಈಗ ಯುಗಾದಿ ಬರುತ್ತದೆ; ಹೊಸ ಪಂಚಾಂಗವು ಪ್ರಾರಂಭವಾಗುತ್ತದೆ; 'ಪಂಚಾಂಗ ಶ್ರವಣ' ನಡೆಯುತ್ತದೆ. ಪಂಚಾಂಗದಲ್ಲಿ ಬರುವ ವಾರ್ಷಿಕ ಫಲವು ಎಲ್ಲವೂ ಶುಭಕರವಾಗಿರುವುದಿಲ್ಲ. ಶುಭಾಶುಭ ಮಿಶ್ರಣವಾಗಿರುವುದೇ ಸಹಜವಾಗಿದೆ; ಅದೇ ದೇವರ ಇಚ್ಛೆಯಾಗಿದೆ. ಅಶುಭಗಳು ನಮ್ಮನ್ನು ಸನ್ಮಾರ್ಗದಲ್ಲಿ ನಡೆಯಲು ಎಚ್ಚರಿಸುವ ಶಿಕ್ಷಕರೆಂದು ತಿಳಿಯಿರಿ. ಅಂತಹ ಶಿಕ್ಷಣವನ್ನು ತಾಳಿಕೊಳ್ಳುವ ಶಕ್ತಿಯನ್ನು ದೇವರು ನಮಗೆ ಕೊಡುತ್ತಿರಲಿ. ಇವೇ ಯುಗಾದಿಯ ಶುಭಾಕಾಂಕ್ಷೆಗಳು.

ಮಾರ್ಚಿ
೧೯೫೫



ಸಂಪುಟ ೧೪
ಸಂಚಿಕೆ ೩

CHITRA

# ಪಂದ್ಯ

ಗುಟ್ಟಹಳ್ಳಿಯೆಂಬೂರಲ್ಲಿರುವ
ಗಟ್ಟಿಗನವ ಬಂಗಾರಯ್ಯ.
ಕಟ್ಟೆಯೇರಿ ಬಲು ಕುಟ್ಟುತ ಹರಟೆ
ಬಿಟ್ಟನೊಂದು ಭಲೆಪಂದ್ಯ:

" ಕೇಳಿರಿ ಕೇಳಿರಿ, ಕೂಡಿರಿ ಎಲ್ಲಾ,
ಹೇಳುವೆ ಬರಿ ಮಾತಲ್ಲ;
ಕೋಳಿಗೆ ಕೈಯನು ತೋರಿಸ ಬಲ್ಲೆ,
ನೋಡಿ ಪರೀಕ್ಷಿಸಿ ನೀವೆಲ್ಲಾ"

" ಏನದು, ಸುಳ್ಳದು, ಸಾಗದು, ಎಲ್ಲಿ?
ತೋರಿಸು!' ಎಂದರು ಜನರೆಲ್ಲಾ.






" ಪಂದ್ಯ ನೂರು ರೂಪಾಯಿಯ ತಂದಿಡಿ,
ತತ್‌ಕ್ಷಣ ತೋರುವೆ ನಿಮಗೆಲ್ಲಾ!

ಸೋತರೆ ನಾನೇ ನೂರು ರೂಪಾಯಿ
ಕೊಡುವೆ ನಿಮಗೆ ಮಾತಾಡದಲೇ"
ಮಾತಿದ ಕೇಳುತೆ, ರೂಪಾಯ್ ನೂರೂ
ಇಟ್ಟರೆಲ್ಲರೂ ಇದಿರಿನಲೇ.

ಹೀಗೆ ತಲೆದೂಗಿ, ಹಾಗೊಮ್ಮೆ ನೋಡಿ
" ಕೇಳಿರೆ "ಂದ ಬಂಗಾರಯ್ಯ,
" ಕಣ್ಣು ಚೆನ್ನಾಗಿ ತೆರೆದು ನೋಡುತಲೆ
ಬನ್ನಿರಿ ಮುಂದಕೆ ನೀವ್ ಅಯ್ಯಾ!

ಕೋಳಿಗೆ ಕೈಯನು ತೋರುವೆನೀಗಲೆ
ನೋಡಿದಿರಾ ನೂರರ ಪಂದ್ಯ?"




"ಮಾರಂಗ"

ಎನಲಾಗೆಲ್ಲರು ಕೋಪಾಟೋಪದಿ
ಕೂಗಿದ "ಿದು ವಂಚನೆ ತಾನೇ?"

"ಮರೆತಿರ ಪಂದ್ಯದ ಮಾತೇನೆಂಬುದ?
ಪುನಃ ಹೇಳಿ ನೀವೀಗದನೇ!
ಕೋಳಿಗೆ ಕೈಯನು ತೋರಿಸಬಲ್ಲೇ,
ತೋರಿದೆನಲ್ಲಾ, ಈಗದನೇ!"

ಬಾಯ್‌ಬಿಗಿದೆಲ್ಲರು ಮಿಕಿಮಿಕಿ ನೋಡಲು
ಗೆದ್ದು ಪಂದ್ಯ ರೂಪಾಯ್ ನೂರು,
ಮಿಾಸೆ ತಿರುವಿ ಮೊಗವೇರಿಸಿ ನಡೆದನು.
ಬಂಗಾರಯ್ಯ ಬಲ್ ಜೋರು!

"ಹೌದೆ"ನ ಲೆಲ್ಲರು "ಭಳಿರೇ!" ಎನ್ನುತ
ಪಲಿಟಿ ಹೊಡೆದ ಬಂಗಾರಯ್ಯ,

"ಬನ್ನಿರಿ, ಹಿಂದೆಯೆ ಬನ್ನಿರಿ!" ಎನ್ನುತ
ಜನರ ಹಿಂದೆ ಕರೆದೊಯ್ದು,
ಅಂಗಳದಲಿ ಕಾಳಾರಿಸುತಿದ್ದಾ
ಜತೆ ಕೋಳಿಗೆ ಕೈತೋರ್ದ!

"ನೋಡಿರೆಲ್ಲರೂ, ಕಣ್ಣುಳ್ಳವರೂ
ಕೋಳಿಗೆ ಕೈಯನು ತೋರಿಸಿದೆ!"
ಎಂದು ತನ್ನ ಕೈ ಎಲ್ಲರಮುಂದೇ
ಕೋಳಿಯಕಡೆ ತೋರಿಸಿದ ನದೇ!

"ನೋಡಿರಿ ಕೈಯನು ಕೋಳಿಗೆ ತೋರಿದೆ!
ಕಟ್ಟಿದ ಪಂದ್ಯವಿದೇತಾನೇ?"



# ಮುಖಚಿತ್ರ

ಅರ್ಜುನನು ಇನ್ನೂ ಹಿಂದಿರುಗಿ ಬಂದಿರಲಿಲ್ಲ. ಅವನ ದಾರಿಯನ್ನು ನಿರೀಕ್ಷಣೆ ಮಾಡುತ್ತ ಯುಧಿಷ್ಠಿರನೇ ಮೊದಲಾದವರು ದ್ರೌಪದಿಯೊಂದಿಗೆ ವನವಾಸ ದಲ್ಲಿದ್ದರು. ಧರ್ಮರಾಯನು ಬ್ರಾಹ್ಮಣರನ್ನು ಆದರಿಸುವನೆಂದು ಎಲ್ಲರಿಗೂ ತಿಳಿದ ವಿಷಯ. ಅಂತೆಯೇ ಒಮ್ಮೆ ಜಟಾಸುರನೆಂಬ ರಾಕ್ಷಸನು ಬ್ರಾಹ್ಮಣವೇಷಧಾರಿ ಯಾಗಿ ಪಾಂಡವರಬಳಿಗೆ ಬಂದು, "ನಾನು ಸಕಲ ವಿದ್ಯೆಗಳನ್ನೂ ಬಲ್ಲವನು, ನಿಮಗೆ ಹೊಸ ಹೊಸ ಶಸ್ತ್ರವಿದ್ಯೆಗಳನ್ನು ಹೇಳಿಕೊಡುತ್ತೇನೆ"ಎಂದು ಅವರನ್ನು ನಂಬಿಸಿದನು. ಧರ್ಮರಾಯನು ನಿಜವೆಂದೇ ನಂಬಿ ಆ ಕಪಟಬ್ರಾಹ್ಮಣನನ್ನು ಚೆನ್ನಾಗಿ ಆದರಿಸಿದನು. ಅವನು ಅವರಿಗೆ ಏನೇನೋ ಹೊಸ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿ ತೋರಿಸುತ್ತ, ಸಮಯ ಹೊಂಚಿ ದ್ರೌಪದಿಯನ್ನು ಎತ್ತಿಕೊಂಡು ಹೋಗಲು ಕಾಯುತ್ತಿದ್ದನು.

ಒಂದು ಬೆಳಗ್ಗೆ ಧೌಮ್ಯ, ರೋಮಶ ಮೊದಲಾದ ಋಷಿಗಳು ಆಹ್ನಿಕಕ್ಕಾಗಿ ನದಿಯಕಡೆಗೆ ಹೋಗಿದ್ದರು. ಭೀಮಸೇನನು ಬೇಟೆಗೆ ಹೋಗಿದ್ದನು. ಇದೇ ಸಮಯವೆಂದುಕೊಂಡು ಕಪಟಬ್ರಾಹ್ಮಣನು ಮೊದಲು ಪಾಂಡವರ ಆಯುಧ ಗಳನ್ನೆಲ್ಲ ಅಡಗಿಸಿಟ್ಟನು. ಬಳಿಕ ನಿಜರೂಪ ಧರಿಸಿ, ದ್ರೌಪದಿಯನ್ನು ಎತ್ತಿಕೊಂಡು ಓಡತೊಡಗಿದನು. ಧರ್ಮರಾಯ, ನಕುಲ ಮತ್ತು ಸಹದೇವರು ಆಯುಧಗಳು ಸಿಕ್ಕದೆಯೇ, ಅವನನ್ನು ಅಡ್ಡಗಿಸಿದರು. ಆ ರಾಕ್ಷಸನು ಅವರನ್ನು ಕೂಡ ಕಂಕುಳಲ್ಲಿ ಸಿಕ್ಕಿಸಿಕೊಂಡು ಓಡತೊಡಗಿದನು. ಸಹದೇವನು ಜಾರಿಕೊಂಡು ಭೀಮನಿಗೆ ಸುದ್ದಿ ತಿಳಿಸಲು ಓಡಿದನು. ಧರ್ಮರಾಯನು ರಾಕ್ಷಸನೊಡನೆ ಧರ್ಮವಾದನಕ್ಕೆ ತೊಡಗಿ ದನು. ಅವನಿಗೆ ಉತ್ತರಕೊಡುವಾಗ ಆ ರಾಕ್ಷಸನ ವೇಗವು ಕಡಮೆಯಾಯಿತು.

ಅಷ್ಟರಲ್ಲಿ ಗದಾಧಾರಿಯಾದ ಭೀಮನು ಗರ್ಜಿಸುತ್ತ ಬರುವುದು ತೋರಿತು. ಜಟಾಸುರನು ಧರ್ಮರಾಯ ಮತ್ತು ನಕುಲರನ್ನು ಬಿಟ್ಟು ದ್ರೌಪದಿಯನ್ನೆತ್ತಿ ಕೊಂಡು ಆಕಾಶಕ್ಕೆ ಉಡ್ಡಾಣಮಾಡಿದನು. ಭೀಮನು ದೊಡ್ಡ ಮರವನ್ನೆ ಕಿತ್ತು ಬಿಸುಟು ಅವನನ್ನು ಕೆಳಕ್ಕೆ ಬೀಳಿಸಿದನು. ಕೂಡಲೇ ಜಟಾಸುರನು ದ್ರೌಪದಿಯನ್ನು ಬಿಟ್ಟು ಭೀಮಸೇನನ ಮೇಲೆ ಬಿದ್ದನು. ಇಬ್ಬರೂ, ಘನಘೋರವಾಗಿ ಕಾದಾಡಿದರು. ಭೀಮಸೇನನು ಗದೆಯಿಂದಲೂ, ವಜ್ರಮುಷ್ಟಿಯಿಂದಲೂ ಜಟಾಸುರನನ್ನು ಹಣ್ಣು ಹಣ್ಣು ಮಾಡಿ, ಎತ್ತಿ ಆಕಾಶಕ್ಕೆ ಬಿಸುಟನು. ಜಟಾಸುರನು ಮುಖವೊಡೆದು ಸತ್ತನು.

ಹೀಗೆ ಪಾಂಡವರಿಗೆ ಅನೇಕ ಕಷ್ಟಗಳು ಬಂದರೂ, ಧೈರ್ಯದಿಂದಲೂ, ಧರ್ಮದಿಂದಲೂ, ಆ ಕಷ್ಟಗಳಿಂದ ಪಾರಾಗುತ್ತಿದ್ದರು.




ಬುಂದೇಲ್‌ಖಂಡದಲ್ಲಿ ಠಾಕೂರ್ ವಂಶಸ್ಥನೊಬ್ಬಾತನಿದ್ದನು. ಆತನನ್ನು ಎಲ್ಲರೂ ದಿರ್ವಾಜೀ ಎಂದು ಕರೆಯುತ್ತಿದ್ದರು. ಹೊಟ್ಟೆಗೆ ತಿಂಡಿಯಿಲ್ಲದಿದ್ದರೂ ಡಾಂಭಿಕತೆ ಮಾತ್ರ ಆತನಲ್ಲಿ ಹೆಚ್ಚಾಗಿತ್ತು. ತನ್ನ ವಂಶದ ಹಿರಿಮೆಯನ್ನು ಕುರಿತು ಗಂಟೆಗಟ್ಟಲೆ ಪ್ರತಾಪ ಕೊಚ್ಚುತ್ತಾ ಎಲ್ಲರ ಕಾಲವನ್ನೂ ಹಾಳು ಮಾಡುತ್ತಿದ್ದನು.

ಒಂದುದಿನ ದಿರ್ವಾಜಿ ಬೀದಿಯಲ್ಲಿ ಒಬ್ಬ ಸಾಹುಕಾರನೊಂದಿಗೆ ಹರಟೆ ಹೊಡೆಯುತ್ತಿರುವಾಗ ತುಸ ದೂರದಲ್ಲಿ ಒಂದು ಗಾಡಿ ಬರುತ್ತಿರುವುದು ಕಂಡುಬಂತು. ಅದರಲ್ಲಿ ದವಸಧಾನ್ಯಗಳ ಮೂಟೆಗಳನ್ನು ಎತ್ತರವಾಗಿ ಹೇರಿದ್ದರು. ಆ ಗಾಡಿಯನ್ನು ಕಂಡ ಕೂಡಲೇ ದಿರ್ವಾಜಿ "ಆಹಾ, ಎಂತಹ ಭಾರಿ ಆನೆ. ನಮ್ಮ ತಾತಂದಿರಹತ್ತಿರ ಇಂತಹುದೇ ಒಂದು ಆನೆಯಿತ್ತು" ಎಂದ.

"ದಿರ್ವಾಜೀ, ನೀವು ಹೇಳುತ್ತಿರುವುದು ತಪ್ಪು. ನಮ್ಮತ್ತ ಬರುತ್ತಿರುವುದು ಆನೆಯಲ್ಲ, ಧಾನ್ಯಗಳ ಮೂಟೆಗಳನ್ನು ಹೇರಿರುವ ಗಾಡಿ" ಎಂದ ಆ ಸಾಹುಕಾರ. "ನಿಮಗೆಲ್ಲೋ ಕಣ್ಣಿಸುರು ಬಂದಿರುವಂತಿದೆ ಸಾಹುಕಾರರೇ, ಆನೆ ಸ್ಪಷ್ಟವಾಗಿ ಕಾಣಿಸುತ್ತಿದೆ" ಎಂದು ದಿರ್ವಾಜಿ ಒತ್ತಿ ಹೇಳಿದ. "ಅದು ಗಾಡಿಯೇ ಹೊರತು ಆನೆಯಲ್ಲ" ಎಂದ ಆ ಸಾಹುಕಾರ.

"ಅದು ಆನೆಯಾದರೆ ನಾನು ನಿಮ್ಮ ತಲೆ ತೆಗೆಸುವೆನು. ಗಾಡಿಯೇ ಆಗಿದ್ದ ಪಕ್ಷಕ್ಕೆನೀವು ನನ್ನ ತಲೆಯನ್ನು ತೆಗೆದುಹಾಕಿಸಿ. ಇದೇ ನಮ್ಮಿಬ್ಬರಲ್ಲಿ ಪಂದ್ಯ" ಎಂದು ಮೀಸೆ ತಿರುವುತ್ತಾ ನುಡಿದ ದಿರ್ವಾಜಿ.

ಸ್ವಲ್ಪ ಸಮಯಕ್ಕೆಲ್ಲಾ ಗಾಡಿ ಅವರ ಸಮೀಪಕ್ಕೆಬಂತು. ನೋಡಿದಿರಾ ದಿರ್ವಾಜಿ, ನೀವು ಸೋತುಹೋದಿರಿ" ಎಂದ ಸಾಹುಕಾರ.

"ಅಹುದು. ನನ್ನ ತಲೆಯನ್ನು ಹಾರಿಸಿಬಿಡಿ" ಎಂದ ದಿರ್ವಾಜಿ. "ಅಯ್ಯೊ, ಅದೆಂತಹ ಮಾತೂಂದ್ರೆ' ಎಂದ ಸಾಹುಕಾರ. ಇನ್ನು ಮೇಲಾದರೂ ದಿರ್ವಾಜಿ ತನ್ನ ವಂಶದ ಪ್ರತಾಪ ಕೊಚ್ಚಿಕೊಳ್ಳುವ ಹವ್ಯಾಸವನ್ನು

ಪಿ. ಕರುಣಾಕರ




ತೊರೆಯುವನೆಂಬ ಆವನ ಆಶೆ ಸುಳ್ಳಾಯಿತು. "ಹಾಗೆ ಸಾಧ್ಯವೇ ಇಲ್ಲ. ನೀವು ಷರತ್ತಿನ ಪ್ರಕಾರ ನನ್ನ ತಲೆ ತೆಗೆಯಿಸಲೇಬೇಕು. ನಮ್ಮ ಠಾಕೂರ್ ವಂಶಸ್ಥರು ಆಡಿದ ಮಾತಿಗೆ ತಪ್ಪುವುದಿಲ್ಲ," ಎಂದು ದಿವಾನ್‌ಜಿ ಹಠ ಹಿಡಿದ. ಸಾಹುಕಾರನಿಗೆ ಪ್ರಾಣಕ್ಕೆಬಂತು.

"ಈ ವಿಷಯವಾಗಿ ನ್ಯಾಯಾಧಿಕಾರಿಯ ಅಭಿಪ್ರಾಯಪಡೆಯುವುದು ಉತ್ತಮವೆಂದು ತೋರುವುದು" ಎಂದ ಸಾಹುಕಾರ.

ಇಬ್ಬರೂ ನ್ಯಾಯಾಧಿಕಾರಿಯ ಬಳಿಗೆ ಹೋದರು. ನ್ಯಾಯಾಧಿಕಾರಿ ವಿಷಯವನ್ನೆಲ್ಲಾ ಆಮೂಲಾಗ್ರವಾಗಿ ಕೇಳಿ, ಸಾಹುಕಾರನು ಇಕ್ಕಟ್ಟಿಗೊಳಗಾಗಿರುವುದನ್ನು ಗ್ರಹಿಸಿ, ಹೀಗೆಂದು ತೀರ್ಪುಕೊಟ್ಟ:

"ದಿವಾನ್‌ಜೀಯವರ ತಲೆ ಸಾಹುಕಾರರ ಸೊತ್ತಾದ ಮಾತು ಖಂಡಿತ. ಆದರೆ ಆತನು ಅದನ್ನು ತನ್ನಿಷ್ಟಬಂದಾಗ ಕಡಿದುಹಾಕಬಹುದು. ಅವಸರ ಪಡಿಸುವ ಅಧಿಕಾರ ಯಾರಿಗೂ ಇಲ್ಲ."

ಈ ತೀರ್ಪನ್ನು ಕೇಳಿ ಸಾಹುಕಾರ ಸಂತೋಷಗೊಂಡ. ದಿವಾನ್‌ಜಿ ಹಾಗೇ ವಾದಿಸಿದ. "ಅಂದರೆ ಈ ಕ್ಷಣದಿಂದ ನನ್ನ ತಲೆಯನ್ನು ರಕ್ಷಿಸುವ, ಮತ್ತು ಪೋಷಿಸುವ ಭಾರ ಸಾಹುಕಾರರು ವಹಿಸಿಕೊಳ್ಳಬೇಕು. ಇದರ ಖರ್ಚೆಲ್ಲಾ ಅವರದೇ. ಇಂದಿನಿಂದ ಇದರ ಜವಾಬ್ದಾರಿ ನನಗೆ ಸೇರಿದ್ದಲ್ಲ."

ಸಾಹುಕಾರನು ಗತ್ಯಂತರವಿಲ್ಲದೆ ದಿವಾನ್‌ಜಿಯ ತಲೆಯನ್ನು ಪೋಷಿಸುವ ಭಾರವನ್ನು ಹೊತ್ತುಕೊಂಡ. ಈ ಹೊಣೆ ಸಾಹುಕಾರನ ತಲೆ ತಿನ್ನುತ್ತಿತ್ತು. ದಿವಾನ್‌ಜಿ ತನ್ನ ವಂಶ ಮರ್ಯಾದೆಗೆ ತಕ್ಕಂತೆ ಸಾಹುಕಾರನಿಂದ ಸೇವೆ ಮಾಡಿಸಿಕೊಳ್ಳುತ್ತಾ ಆತನ ಮನೆ ಗುಲ್ಲು ಮಾಡಲು ಪ್ರಾರಂಭಿಸಿದ.

ಕೆಲವು ದಿನಗಳು ಹೀಗೇ ಕಳೆದವು. ಒಂದು ದಿನ ಸಾಹುಕಾರನ ಮಿತ್ರರೆಲ್ಲಾ ಒಂದುಕಡೆ ಸೇರಿ ತಮ್ಮ ಮಿತ್ರನಿಗೆ ಗಂಟು ಬಿದ್ದಿರುವ ಈ ಶನಿಯನ್ನು ತೊಲಗಿಸುವ ಮಾರ್ಗವನ್ನು ಕುರಿತು ಚರ್ಚಿಸಿದರು. ಅವರು ಅದನ್ನು ಆ ಸಾಹುಕಾರನಿಗೆ ತಿಳಿಸಿದರು.

ಮೂರನೇಯ ದಿನ ಒಬ್ಬ ವ್ಯಾಪಾರಿ "ಮೂಗು, ಕಿವಿಗಳನ್ನು ಕೊಳ್ಳುತ್ತೇನೆ"

ಎಂದು ಕೂಗುತ್ತಾ ಸಾಹುಕಾರನ ಮನೆ ಮುಂದೆ ಹೋಗುತ್ತಿದ್ದ. ಸಾಹುಕಾರನು ತನ್ನ ನೌಕರನನ್ನು ಕಳುಹಿಸಿ ಆ ವ್ಯಾಪಾರಿಯನ್ನು ಬರಮಾಡಿಕೊಂಡು "ಏನು ನೀನು ಕೊಂಡು ಕೊಳ್ಳುವುದು?" ಎಂದು ಕೇಳಿದ.

ಅದಕ್ಕೆ ಆ ವ್ಯಾಪಾರಿ "ಮನುಷ್ಯರ ಕಿವಿ ಮೂಗುಗಳನ್ನು ಕೊಳ್ಳುತ್ತೇನೆ" ಎಂದ.

"ಬೆಲೆ ಏನು ಕೊಡುವೆ?" ಎಂದು ಕೇಳಿದ ಸಾಹುಕಾರ. "ಉತ್ತಮ ವಂಶದವರ ಕಿವಿ ಮೂಗುಗಳಿಗೆ ಐನೂರು ರೂಪಾಯಿ ಕೊಡುತ್ತೇನೆ" ಎಂದ ಆ ವ್ಯಾಪಾರಿ.

ಸಾಹುಕಾರನು ಅವನಿಗೆ ದಿವಾರ್ಜಿಯನ್ನು ತೋರಿಸುತ್ತಾ "ಇವರು ಗಣ್ಯವಂಶಕ್ಕೆ ಸೇರಿದವರು. ಠಾಕೂರ್ ಮನೆತನದವರು. ಇವರ ತಲೆ ಈಗ ನನ್ನ ವಶದಲ್ಲಿದೆ. ನೀನು ಐನೂರು ರೂಪಾಯಿ ಕೊಟ್ಟು ಇವರ ಕಿವಿ ಮೂಗುಗಳನ್ನು ಕೊಯ್ದುಕೊಂಡು ಹೋಗು" ಎಂದು ಗಂಭೀರವಾಗಿ ನುಡಿದ.

ದಿವಾರ್ಜಿ ಭಯದಿಂದ ಕಂಪಿಸುತ್ತಾ, "ಸಾಹುಕಾರರೇ, ಇದು ತರವಲ್ಲ" ಎಂದ.

"ಅದು ಹೇಗೆ? ಈ ತಲೆ ನನ್ನ ಸೊತ್ತು. ಅಪಾರ ಹಣ ಸುರಿಸಿ ಅದನ್ನು ಕಾಪಾಡುತ್ತಿದ್ದೇನೆ" ಎಂದ ಸಾಹುಕಾರ.

"ನಾವು ನ್ಯಾಯಾಧಿಪತಿಯ ಬಳಿಗೆ ಹೋಗಿ ಅವರ ಸಲಹೆ ಪಡೆಯುವುದು ಸೂಕ್ತವೆಂದು ಸೂಚಿಸುತ್ತೇನೆ" ಎಂದ ದಿವಾರ್ಜಿ.

ಇಬ್ಬರೂ ಮತ್ತೊಮ್ಮೆ ನ್ಯಾಯಾಧಿಪತಿಯ ಬಳಿಗೆ ಹೋಗಿ ಎಲ್ಲಾ ಹೇಳಿ ನ್ಯಾಯವನ್ನು ನುಡಿಯುವಂತೆ ಪ್ರಾರ್ಥಿಸಿದರು. ನ್ಯಾಯಾಧಿಪತಿ ಯೋಚಿಸಿ, "ದಿವಾರ್ಜಿ, ನಿಮ್ಮ ಮೂಗು ಕಿವಿಗಳನ್ನು ಮಾರುವ ಹಕ್ಕು, ಅಧಿಕಾರ ಸಾಹುಕಾರರಿಗಿದೆ. ಹಾಗಿಲ್ಲವೆಂದು ನೀವು ವಾದಿಸುವುದಾದರೆ, ಅವರು ಇಷ್ಟು ದಿನ ನಿಮ್ಮ ತಲೆಯನ್ನು ನಿಮ್ಮ ಪರವಾಗಿ ಪೋಷಿಸಿದ್ದಾರೆ. ಆ ಯಾವತ್ತೂ ಖರ್ಚನ್ನು ನೀವು ಅವರಿಗೆ ಕೊಡಬೇಕಾಗುವುದು" ಎಂದ.

ಮರುಮಾತನಾಡದೆ ದಿವಾರ್ಜಿ ತನ್ನ ಹತ್ತಿರವಿದ್ದ ಅಲ್ಪಸ್ವಲ್ಪ ಆಸ್ತಿಯನ್ನು ಸಾಹುಕಾರನ ಹೆಸರಿಗೆ ಬರೆದುಕೊಟ್ಟು, ಆ ಗ್ರಾಮವನ್ನು ಬಿಟ್ಟು ಎಲ್ಲಿಗೋ ಹೊರಟುಬಿಟ್ಟನು.





# ನಾಲ್ಕನೇ ಕಳ್ಳ

ಒಂದಾನೊಂದು ದೇಶದಲ್ಲಿ ಮೂವರು ಕಳ್ಳರಿದ್ದರು. ಅವರು ಪ್ರತಿದಿನಾ ಕಳ್ಳತನ ಮಾಡುತ್ತಿದ್ದರೂ ಅವರನ್ನು ಹಿಡಿಯಲು ಯಾರಿಂದಲೂ ಸಾಧ್ಯವಾಗಲಿಲ್ಲ. ಆ ಕಳ್ಳರ ಹೆಸರು ಕೇಳಿದರೆ ಹಣವಂತರು ಗಡಗಡ ನಡುಗುವುದುಂಟು. ಅವರನ್ನು ಹೇಗಾದರೂ ಹಿಡಿಯಲು ನಿಶ್ಚಯಿಸಿ, ಆ ದೇಶದ ರಾಜನು ತಾನೂ ಒಬ್ಬ ಕಳ್ಳನಂತೆ ವೇಷ ಬದಲಾಯಿಸಿಕೊಂಡು ಸಂಚರಿಸುತ್ತಿದ್ದನು.

ಈ ರೀತಿ ಅನೇಕ ರಾತ್ರಿ ಸುತ್ತಾಡಿದ ನಂತರ ಒಂದು ಅಮಾವಾಸ್ಯೆಯ ರಾತ್ರಿ ರಾಜನಿಗೆ ಆ ಕಳ್ಳರಿದ್ದ ಸ್ಥಳ ಗೊತ್ತಾಯಿತು. ಆ ಕಳ್ಳರು ಆ ರಾತ್ರಿ ತಾವು ಮಾಡಲೆಣಿಸಿದ ಕಳ್ಳತನವನ್ನು ಕುರಿತು ಮಾತನಾಡಿಕೊಳ್ಳುತ್ತಿದ್ದರು. ಹೊಸಬನನ್ನು ಕಂಡಕೂಡಲೇ ಕಳ್ಳರು ಚಕಿತರಾಗಿ "ನೀನು ಯಾರು? ಇಲ್ಲಿಗೇಕೆ ಬಂದೆ?" ಎಂದು ಕೇಳಿದರು.

"ನಾನೂ ಒಬ್ಬ ಕಳ್ಳ. ಈಕಡೆಯಲ್ಲೆಲ್ಲಾ ನೀವು ತುಂಬಾ ಪ್ರಸಿದ್ಧಿಪಡೆದ ಕಳ್ಳರೆಂದು ಕೇಳಿ ನಿಮಗೆ ನನ್ನ ಕೈಚಳಕವನ್ನು ತೋರಿಸಲು ಬಂದೆ" ಎಂದು ವಿನಯದಿಂದ ನುಡಿದ ರಾಜ.

ಮೂವರು ಕಳ್ಳರು ಒಂದುಸಾರಿ ಗಹಗಹಿಸಿ ನಕ್ಕು "ನಮ್ಮ ಶಕ್ತಿಯನ್ನು ಕುರಿತು ನಿನಗೇನಾದರೂ ತಿಳಿದಿದೆಯೇ?" ಎಂದು ಕೇಳಿದರು. "ಇಲ್ಲ. ನನಗೆ ತಿಳಿಯದು. ನೀವು ಹೇಳಿ, ಕೇಳುತ್ತೇನೆ" ಎಂದು ರಾಜನು ಆತುರ ತೋರಿಸಿದ.

"ನಾನು ಯಾವ ಬೀಗವನ್ನೇ ಆಗಲಿ ಒಂದು ಮೊಳೆಯ ಸಹಾಯದಿಂದ ತೆಗೆದುಬಿಡುತ್ತೇನೆ" ಎಂದ ಒಬ್ಬ ಕಳ್ಳ.

"ನಾನು ನೆಲದಮೇಲೆ ಕಿವಿಯಿಟ್ಟು ಕೇಳಿದರೆ ಹಣವಿರುವ ಸ್ಥಳವನ್ನು ಕೂಡಲೇ ಕಂಡುಹಿಡಿಯಬಲ್ಲೆ" ಎಂದ ಎರಡನೇಯವನು.

"ಒಂದುಬಾರಿ ನೋಡಿದಾತನನ್ನು ಆತನು ಯಾವ ಮಾರುವೇಷದಲ್ಲಿದ್ದರೂ ಗುರುತಿಸಬಲ್ಲೆ" ಎಂದ ಮೂರನೇಯವನು. ಅನಂತರ "ಸರಿ, ಈಗ ನಿನ್ನ ಚಾತುರ್ಯದ ವಿಷಯ

ಯಚ್. ಎಸ್. ಶಿವರಾವ್

ಹೇಳು" ಎಂದು ಮೂವರೂ ಕೇಳಿದರು. ಅವರ ಕುತೂಹಲ ತುಂಬಾ ಕೆರಳಿತ್ತು.

ರಾಜನಿಗೆ ಏನೆಂದು ಉತ್ತರ ಕೊಡಬೇಕೋ ತತ್ ಕ್ಷಣ ಹೊಳೆಯಲಿಲ್ಲ. ಅದರಿಂದ ಆತನು ಹೀಗೆಂದ: "ನಾನು ಅಂಗುಷ್ಠವನ್ನು ಕೆಳಮುಖ ಮಾಡಿದರೆ ಯಾರನ್ನಾದರೂ ಯಮಲೋಕಕ್ಕೆ ಕಳುಹಿಸಬಲ್ಲೆ. ತೋರುಬೆರಳನ್ನು ಮೇಲಕ್ಕೆತ್ತಿದರೆ ಸಾಯುವ ಪರಿಸ್ಥಿತಿಯಲ್ಲಿರುವವರನ್ನೂ ಸಹ ಉಳಿಸಬಲ್ಲೆ"

ಈ ಮಾತು ಕೇಳಿ ಕಳ್ಳರು ಸಂತೋಷಪಟ್ಟು ಆತನನ್ನು ಮೆಚ್ಚಿದರು.

"ಇಂದು ರಾತ್ರಿ ಕಳ್ಳತನ ಮಾಡಲು ಎಲ್ಲಿಗೆ ಹೋಗೋಣ" ಎಂದು ಕೇಳಿದ ರಾಜ.

"ನಿನ್ನಿಷ್ಟ. ನೀನು ಹೇಳಿದ ಸ್ಥಳಕ್ಕೆ ಹೋಗೋಣ. ನಮ್ಮ ಶಕ್ತಿಸಾಮರ್ಥ್ಯಗಳನ್ನು ನೀನೇ ನೋಡುವಿಯಂತೆ" ಎಂದರು ಕಳ್ಳರು.

"ಹಾಗಾದರೆ ಮಹಾರಾಜರ ಖಜಾನೆಯನ್ನು ಕೊಳ್ಳೇ ಹೊಡೆಯೋಣ" ಎಂದು ಸೂಚಿಸಿದ ರಾಜ.

ನಾಲ್ವರೂ ಅರಮನೆಯ ಕಡೆಗೆ ದಾರಿ ಹಿಡಿದರು. ಪಹರೆಯವರ ಕಣ್ಣಿಗೆ ಬೀಳದೆ ಒಳಗೆ ನುಗ್ಗಿದರು. ಎರಡನೇ ಕಳ್ಳ ನೆಲಕ್ಕೆ ತನ್ನ ಕಿವಿಯನ್ನು ಸೋಂಕಿಸಿ ಆಲಿಸಿ, "ಖಜಾನೆ ಇತ್ತ ಕಡೆ ಇದೆ" ಎಂದ.

ನಾಲ್ವರೂ ಅತ್ತ ಕಡೆ ನಡೆದರು. ಖಜಾನೆಗೆ ಭಾರೀ ಬೀಗ ಹಾಕಲಾಗಿತ್ತು. ಆದರೆ ಅದನ್ನು ಮೊದಲನೇ ಕಳ್ಳನು ಲೀಲಾಜಾಲವಾಗಿ ಮುರಿದನು. ಕಳ್ಳರು ಒಳಗೆ ನುಗ್ಗಿದರು.



ಈ ಸಮಯ ಸಾಧಿಸಿ ರಾಜನು ಅವರಿಗೆ ತಿಳಿಯದಂತೆ ನುಸುಳಿಕೊಂಡು ತನ್ನ ಭಟರನ್ನು ಖಜಾನೆಯ ಬಳಿಗೆ ಕಳುಹಿಸಿದ. ಆ ಮೂವರು ಕಳ್ಳರೂ ಸಿಕ್ಕಿಬಿದ್ದರು.

ಮಾರನೆಯದಿನ ಅವರ ವಿಚಾರಣೆ ನಡೆಸಲು ಆಸ್ಥಾನಕ್ಕೆ ಆ ಕಳ್ಳರನ್ನು ಕರೆತಂದರು. ಸಿಂಹಾಸನದಮೇಲೆ ಠೀವಿಯಿಂದ, ಗಂಭೀರ ಮುಖ ಮುದ್ರಿತನಾಗಿ ಕುಳಿತಿದ್ದ ರಾಜನನ್ನು ನೋಡಿದ ಕೂಡಲೇ ಕಳ್ಳರಲ್ಲಿ ಕಿರಿಯವನು ತನ್ನ ಸಂಗಡಿಗರೊಂದಿಗೆ "ಈತನೇ ನಿನ್ನೆ ನಮ್ಮ ಬಳಿಗೆ ಬಂದಿದ್ದ ಹೊಸವ್ಯಕ್ತಿ" ಎಂದ.

ವಿಚಾರಣೆ ನಡೆದ ಕೂಡಲೇ ರಾಜನು ತನ್ನ ಹೆಬ್ಬೆರಳನ್ನು ಕೆಳಮುಖ ಮಾಡಿದ. ಆ ಕಳ್ಳರಿಗೆ ಮರಣಶಿಕ್ಷೆ ವಿಧಿಸಲಾಯಿತು.

ಮಾರನೆಯ ದಿನ ಮುಂಜಾನೆ ಅವರನ್ನು ನೇಣುಗಂಬದ ಹತ್ತಿರಕ್ಕೆ ಕರೆದುಕೊಂಡು ಹೋದರು. ಅಧಿಕಾರಿಯರಲ್ಲೊಬ್ಬನು ಬಂದು "ನಿಮ್ಮ ಕೊನೆಯ ಕೋರಿಕೆ ಏನು? ಕೇಳಿಕೊಳ್ಳಿ" ಎಂದು ಆ ಕಳ್ಳರನ್ನು ಕೇಳಿದನು.

"ಮಹಾರಾಜರನ್ನು ಒಂದುಸಾರಿ ಕಂಡು ಮಾತನಾಡಬೇಕಾಗಿದೆ. ದಯವಿಟ್ಟು ಈ ಒಂದು ಅವಕಾಶ ಕಲ್ಪಿಸಿಕೊಡಿ" ಎಂದರು.

ಅಂತೆಯೇ ಮಹಾರಾಜನು ಬಂದ.

"ಏನು ವಿಶೇಷ?" ಎಂದು ಕೇಳಿದ.

"ಮತ್ತೇನಿಲ್ಲ ಮಹಾ ಪ್ರಭೂ, ನಮ್ಮ ಶಕ್ತಿಸಾಮರ್ಥ್ಯಗಳನ್ನು ನಿಮ್ಮಮುಂದೆ ಪ್ರದರ್ಶಿಸಿದೆವು. ನಿಮ್ಮ ಶಕ್ತಿಯನ್ನು ಕುರಿತು ನಮ್ಮೊಂದಿಗೆ ಎರಡು ವಿಷಯಗಳನ್ನು ಪ್ರಸ್ತಾಪಿಸಿದಿರಿ. ಅದರಲ್ಲಿ ಒಂದನ್ನುಮಾತ್ರ ತಾವು ಪ್ರದರ್ಶಿಸಿದಿರಿ. ಎರಡನೆಯದನ್ನೂ ನೋಡಬೇಕೆಂದು ನಮಗೆ ಆಶೆ. ಇದನ್ನು ಪೂರ್ತಿಗೊಳಿಸಿಕೊಡಬೇಕೆಂದು ಪ್ರಾರ್ಥನೆ."

ಅವರ ಮಾತನ್ನುಕೇಳಿ ರಾಜನು ಮುಗುಳುನಕ್ಕು, ತನ್ನ ತೋರು ಬೆರಳನ್ನು ಮೇಲಕ್ಕೆ ಎತ್ತಿದ. ಕೂಡಲೇ ರಾಜಭಟರು ಬಂದು ಕಳ್ಳರನ್ನು ಬಂಧಮುಕ್ತರನ್ನಾಗಿ ಮಾಡಿದರು.

ಅಂದಿನಿಂದ ಆ ಚೋರರು ಚೋರವೃತ್ತಿಯನ್ನು ತ್ಯಜಿಸಿ, ರಾಜನ ಆಸ್ಥಾನದಲ್ಲೇ ನೆಲಸಿ, ರಾಜನನ್ನು ಅಪಾರ ಭಕ್ತಿಗೌರವಗಳಿಂದ ಸೇವಿಸುತ್ತಿದ್ದರು.





# ಔದಾರ್ಯ

ಎರಡುಸಾವಿರ ವರ್ಷಗಳ ಕೆಳಗೆ ಚೀಣಾ ದೇಶದಲ್ಲಿ ಸೋ–ಪೋ ತಾವೂ ಎಂಬ ವೃದ್ಧನಿದ್ದನು. ಆತನು ಭಾರಿ ವಿದ್ವಾಂಸನಾಗಿದ್ದನು. ಆದರೆ ಆತನ ಪಾಂಡಿತ್ಯವನ್ನು ಮೆಚ್ಚಿ ಆದರಿಸುವ ದಾತರಿಲ್ಲವಾದುದರಿಂದ ಆತನು ಕಷ್ಟಕಾರ್ಪಣ್ಯಗಳನ್ನು ಅನುಭವಿಸುತ್ತಿದ್ದನು.

ಚೂ ರಾಜ್ಯದ ಅರಸನು ಮಹಾ ಮೇಧಾವಿ ಎಂತಲೂ ಪಂಡಿತೋತ್ತಮನೆಂತಲೂ ಪ್ರಸಿದ್ಧಿ ಪಡೆದಿದ್ದ. ಆತನು ಪಂಡಿತರನ್ನು ಬಹಳವಾಗಿ ಮಾರ್ಯಾದೆ ಮಾಡುತ್ತಿದ್ದನೆಂದು ಪ್ರತೀತಿಯಿತ್ತು. ಆತನ ಬಳಿಗೆ ಹೋಗಿ ಸನ್ಮಾನ ಪಡೆಯಬೇಕೆಂದು ತಾವೂಗೆ ಆತನ ಮಿತ್ರರು ಸೂಚಿಸಿದರು. ತಾವೂ ತನ್ನ ಬಳಿಯಿದ್ದ ಉಣ್ಣೆಯ ಬಟ್ಟೆಗಳನ್ನೂ, ಅಲ್ಪ ಸ್ವಲ್ಪ ಧನವನ್ನೂ ತೆಗೆದುಕೊಂಡು ಕಾಲು ನಡಿಗೆಯುಲ್ಲಿ ಚೂ ರಾಜ್ಯಕ್ಕೆ ಪ್ರಯಾಣ ಬೆಳೆಸಿದ.

ಚೂ ನಗರವನ್ನು ಮುಟ್ಟಲು ಅನೇಕ ನೂರು ಮೈಲು ಪ್ರಯಾಣಮಾಡಬೇಕು. ಬೆಟ್ಟಗುಡ್ಡಗಳ ಮೇಲಿಂದ ಹೋಗಬೇಕು. ದಾರಿ ಮಧ್ಯದಲ್ಲಿ ಚಳಿಗಾಳಿ ಪ್ರಾರಂಭವಾಯಿತು. ಕೆಲವುದಿನ ವಿಶ್ರಾಂತಿ ಪಡೆದು ಆ ತರುವಾಯ ಪ್ರಯಾಣ ಮುಂದುವರಿಸೋಣವೆಂದು, ತಾವೂ ಯಾಂಗ್-ಚಿಯಾವೂ-ಆಯಿ ಎಂಬಾತನಿದ್ದ ಗ್ರಾಮಕ್ಕೆ ಹೋದನು.

ಆಯಿ ತಾವೂಗೆ ಯೋಗ್ಯ ಅತಿಥಿಸತ್ಕಾರವನ್ನು ಮಾಡಿದ. ತಾವೂ ಪಂಡಿತನೆಂದು ತಿಳಿದು ಆಯಿ ಮತ್ತಷ್ಟು ಆನಂದಹೊಂದಿದ. ಆದರೆ ಆಯಿ ಮಾತ್ರ ಸಾಮಾನ್ಯನಲ್ಲ. ಆತನ ಬಳಿಯಲ್ಲಿದ್ದ ಹಳೆಯ ಗ್ರಂಥಗಳ ರಾಶಿಯನ್ನು ನೋಡಿ ಆಯಿ ತನಗಿಂತಲೂ ಹೆಚ್ಚಿನ ಪಾಂಡಿತ್ಯವನ್ನು ಗಳಿಸಿರುವನೆಂದು ತಾವೂ ಗ್ರಹಿಸಿದ. ಆಯಿ ಮಹಾ ಪಂಡಿತನೆಂದು ರುಜು ಮಾಡಿಕೊಂಡ.

"ಚೂ ದೇಶದ ರಾಜನು ಪಂಡಿತರನ್ನು ತುಂಬಾ ಆದರಾಭಿಮಾನಗಳಿಂದ ಸತ್ಕರಿಸುವನೆಂದು ತಿಳಿಯಿತು. ಆತನನ್ನು ನೋಡಲು ಹೋಗುತ್ತಿರುವೆನು. ನೀನೂ ನನ್ನೊಂದಿಗೆ ಬರಬಾರದೇಕೆ?" ಎಂದು ಕೇಳಿದ ತಾವೂ.

ಡಿ. ಸುಬ್ರಹ್ಮಣ್ಯ

ಇಬ್ಬರೂ ಒಟ್ಟಿಗೆ ಪ್ರಯಾಣ ಬೆಳೆಸಿದರು. ಅವರು ಹಾಗೆ ಹೋಗುತ್ತಿರುವಾಗ ಮಂಜಿನ ಬಿರುಗಾಳಿ ಪ್ರಾರಂಭವಾಯಿತು. ಲಿಯಾಂಗ್ ಪರ್ವತಗಳ ನಡುವೆ ಅವರಿಬ್ಬರೂ ಈ ತುಫಾನಿಗೆ ಸಿಲುಕಿಕೊಂಡರು.

ಇನ್ನೂ ನಾಲ್ಕುದಿನ ನಡೆದ ಹೊರತು ಅವರು ಚೂ ದೇಶವನ್ನು ಸೇರುವಂತಿಲ್ಲ. ಆದರೆ ಅವರು ಈ ತುಫಾನಿನಲ್ಲಿ ಒಂದೇ ಒಂದು ಹೆಜ್ಜೆಯಾದರೂ ಮುಂದಕ್ಕೆ ಇಡಲು ಸಾಧ್ಯವಿರಲಿಲ್ಲ. ಅವರು ಚಳಿಗೆ ಸಿಕ್ಕಿ ಸಾಯುವ ಪರಿಸ್ಥಿತಿ ಒದಗಿತು. ವೃದ್ಧನಾದ ತಾವೂನ ಸ್ಥಿತಿ ತುಂಬಾ ಶೋಚನೀಯವಾಗಿತ್ತು. ಆತನು ನಡುಗುತ್ತಾ ಆಯಿಯನ್ನು ಕುರಿತು "ತಮ್ಮಾ, ನಾನಂತೂ ಚೂ ದೇಶವನ್ನು ಸೇರಲಾರೆ. ನನ್ನ ಉಣ್ಣೆಯ ಬಟ್ಟೆಗಳನ್ನು ನೀನೇ ಧರಿಸಿಕೊಂಡರೆ ಮುಂದೆ ನಡೆಯಲು ಸಾಧ್ಯವಾದೀತು. ನನ್ನ ಬಟ್ಟೆಗಳನ್ನು ಕೊಡುತ್ತೇನೆ, ಹಾಕಿಕೋ" ಎಂದ.

ಆಯಿ ಈ ವ್ಯವಸ್ಥೆಗೆ ಸುತರಾಂ ಒಪ್ಪಿಕೊಳ್ಳಲಿಲ್ಲ. "ಹೋದರೆ ಇಬ್ಬರೂ ಹೋಗಬೇಕು. ಇಲ್ಲ, ಚಳಿಗೆ ಈರ್ವರೂ ಬಲಿಯಾಗಬೇಕು. ನಿಮ್ಮ ಬಟ್ಟೆಗಳನ್ನು ತೊಟ್ಟುಕೊಂಡು ನಿಮ್ಮ ಮರಣಕ್ಕೆ ಕಾರಣಭೂತನಾಗಲು ನಾನು ಒಪ್ಪಲಾರೆ" ಎಂದ ಆಯಿ.

"ತಮ್ಮಾ, ನೀನಿನ್ನೂ ಯುವಕ. ನಾನು ಮಸಣದಕಡೆ ಆಗಲೇ ಕಾಲು ಚಾಚಿರುವೆನು. ಚೂ ರಾಜನು ನನಗೆ ಸನ್ಮಾನ ಮಾಡಿದರೆಷ್ಟು, ಬಿಟ್ಟರೆಷ್ಟು? ಅದಷ್ಟೇ ಅಲ್ಲ. ನೀನು ನನ



ಗಿಂತಲೂ ಅದ್ವಿತೀಯ ಪಂಡಿತನು. ನಿನಗೆ ಸನ್ಮಾನ ನಡೆಯುವುದು ಉಚಿತ" ಎಂದು ಪರಿಪರಿವಿಧವಾಗಿ ಹೇಳಿ ನೋಡಿದ. ಆದರೆ ಆಯಿ ತನ್ನ ಹಠವನ್ನು ಬಿಡಲಿಲ್ಲ. ಮಂಜಿನಿಂದ ತಪ್ಪಿಸಿಕೊಳ್ಳಲು ಅವರಿಬ್ಬರೂ ಒಂದು ಗುಹೆಯಲ್ಲಿ ಪ್ರವೇಶ ಮಾಡಿದರು.

"ಎಲ್ಲಿಯಾದರೂ ನಾಲ್ಕು ಕಡ್ಡಿ ಪುರಳೆ ಸಿಕ್ಕಿದರೆ ಸ್ವಲ್ಪ ಬೆಂಕಿಮಾಡಿ ಮೈ ಕಾಯಿಸಿಕೊಳ್ಳಬಹುದು" ಎಂದ ತಾವೂ. ಆಯಿ ಕಡ್ಡಿಗಳನ್ನುತರಲು ಗುಹೆಯಿಂದ ಹೊರಗೆ ಹೋದ.

ತಾವೂ ತನ್ನ ಉಣ್ಣೆಯ ಬಟ್ಟೆಗಳನ್ನು ಕಳಚಿ, ಒಂದು ಮೂಲೆಯಲ್ಲಿಟ್ಟು, ತಾನು ಗುಹೆಗೆ ಸ್ವಲ್ಪ ದೂರದಲ್ಲಿ ಮಂಜುತುಂಬಿದ್ದ ಹಳ್ಳದೊಳಕ್ಕೆ ಹಾರಿದ.

ಆಯಿ ಹಿಂತಿರುಗಿ ಬಂದು ನೋಡಲು ಗುಹೆಯಲ್ಲಿ ತಾವೂ ಬಟ್ಟೆಗಳು ಮಾತ್ರವಿದ್ದವು. ಆತನು ದುಗುಡದಿಂದ ಹೊರಗೆ ಬಂದು ಹುಡುಕಾಡಿದ. ಮಂಜಿನ ಹಳ್ಳದಲ್ಲಿ ತಾವೂ ಶರೀರ ಕಾಣಿಸಿತು. ಆಯಿ ಬಹಳ ದುಖಪಟ್ಟ. ಆತನ ಶವವನ್ನು ಆ ಗುಹೆಯಲ್ಲಿಯೇ ಭದ್ರಗೊಳಿಸಿ, ತಾವೂ ಬಿಟ್ಟುಹೋದ ಬಟ್ಟೆಗಳನ್ನು ತೊಟ್ಟುಕೊಂಡು, ಆಯಿ ಚೂ ದೇಶವನ್ನು ಸೇರಿಕೊಂಡನು.

ಚೂ ದೇಶದ ಅರಸನು ಆಯಿ ಪಾಂಡಿತ್ಯಕ್ಕೆ ಬೆರಗಾಗಿ, ತನ್ನ ಆಸ್ಥಾನ ಕವಿಯನ್ನಾಗಿ ನೇಮಿಸಿಕೊಂಡನು. ಆತನಿಗೆ ಅಪಾರ ಧನ ಮತ್ತು ವಸ್ತುವಾಹನಗಳನ್ನು ಕೊಟ್ಟು ಸತ್ಕರಿಸಿದನು. ಇಷ್ಟೊಂದು ಸನ್ಮಾನ ಪಡೆಯುತ್ತಿದ್ದರೂ ಆಯಿ ಕಣ್ಣಿನಲ್ಲಿ ನೀರು ಸುರಿಯುತ್ತಿತ್ತು. ರಾಜನು ಇದನ್ನು ಗಮನಿಸಿ ಕಾರಣವೇನೆಂದು ಕೇಳಿದನು. ಆಗ ಆಯಿ "ಪ್ರಭೂ, ನನ್ನ ಪಾಂಡಿತ್ಯಕ್ಕೆ ನೀವಿಷ್ಟೊಂದು ವಿಧವಾಗಿ ಸತ್ಕರಿಸಿದಿರಿ. ತಾವೂ ಔದಾರ್ಯದ ಮುಂದೆ ನನ್ನ ಪಾಂಡಿತ್ಯ ಯಾವ ಮೂಲೆಗೆ" ಎಂದ.

ತಾವೂ ಮಾಡಿದ ತ್ಯಾಗವನ್ನು ಕೇಳಿ ರಾಜನು ಚಕಿತನಾದನು. ಆತನು ಆಯಿ ಸಂಗಡ ತಾವೂ ಶವವಿದ್ದ ಗುಹೆಗೆ ಹೋಗಿ, ತಾವೂಗೆ ಅಂತ್ಯಸಂಸ್ಕಾರಗಳನ್ನು ಜರುಗಿಸಿ, ಒಂದು ಸಮಾಧಿಯನ್ನು ಕಟ್ಟಿಸಿದನು. ತಾವೂ ಸಮಾಧಿ ಒಂದು ಯಾತ್ರಾಸ್ಥಳವಾಯಿತು.





# ಮುಖಭಂಗ

ವಾರಣಾಸಿ ನಗರದಲ್ಲಿ ಒಬ್ಬಾಕೆ ಇದ್ದಳು. ತಾನು ಮಹಾ ಪತಿವ್ರತೆ ಎಂದು ಆಕೆಗೆ ತುಂಬಾ ಹೆಮ್ಮೆಯಿತ್ತು. ಗಂಡನು ಊಟ ಮಾಡದೆ ಆಕೆ ಊಟಮಾಡುತ್ತಿರಲಿಲ್ಲ. ಗಂಡ ಯಾವುದಾದರೂ ಊರಿಗೆ ಹೋದರೆ ಆತನು ಅಲ್ಲಿ ಊಟಮಾಡವನೋ ಇಲ್ಲವೋ ಎಂಬ ಸಂಶಯದಿಂದ ಆಕೆ ಒಂದು ಗುಟುಕು ನೀರು ಮಾತ್ರವೇ ಕುಡಿದು ಉಪವಾಸವಿರುತ್ತಿದ್ದಳು. ಈ ಮೂಢ ಭಕ್ತಿಯನ್ನು ಕಂಡು ನೆರೆಹೊರೆಯ ಹೆಂಗಸರು ನಗುತ್ತಿದ್ದರು. ಆಕೆ ಅವರನ್ನು ಬಹಳವಾಗಿ ಆಕ್ಷೇಪಿಸುತ್ತಿದ್ದಳು.

"ನಿಮಗೆ ಪತಿವ್ರತಾಧರ್ಮವೆಂದರೇನೆಂಬುದು ತಿಳಿಯದು. ಗಂಡನು ಒಂದು ಹೊತ್ತು ಮನೆಗೆ ಬರುವುದಿಲ್ಲವೆಂದು ತಿಳಿದು ಬಿಟ್ಟರೆ ಆಯಿತು, ನಿಮ್ಮ ಪಾಡಿಗೆನೀವು ಊಟಮಾಡಿ ಬಿಡುವಿರಿ. ಒಂದು ಹೊತ್ತು ಉಪವಾಸವಿದ್ದರೇನು ಮಹಾ? ನೆರೆ ಊರಿಗೆ ಹೋದಾತನು ಏನಾದರೂ ತಿಂದನೋ ಇಲ್ಲವೋ ಎಂಬುದನ್ನು ಯೋಚಿಸುವುದೇ ಇಲ್ಲ. ನಾನೆಂದೂ ಹಾಗೆ ಮಾಡಲಾರೆನಮ್ಮಾ" ಎಂದು ಉಪನ್ಯಾಸ ಕೊಡುವಳು.

ಈ ರೀತಿ ಭಾಷಣಗಳನ್ನು ಕೇಳಿ ಕೇಳಿ ಉಳಿದ ಹೆಂಗಸರಿಗೆ ಬೇಜಾರಾಗಿತ್ತು. ಅವರು ತಮ್ಮ ಗಂಡಂದಿರಿಗೂ ಈ ವಿಷಯ ತಿಳಿಸಿದರು. ಆ ಗಂಡಸರೆಲ್ಲಾ ಆಕೆಯ ಗಂಡನ ಹತ್ತಿರ ಆಕೆಯನ್ನು ಕುರಿತು ಪರಿಹಾಸ್ಯ ಮಾಡಲು ಪ್ರಾರಂಭಿಸಿದರು. ಜನರ ಹಾಸ್ಯ, ಟೀಕೆಗಳನ್ನು ಕೇಳಿ ಕೇಳಿ ಆತನ ಮನಸ್ಸು ರೋಸಿಹೋಗಿತ್ತು. ತನ್ನ ಹೆಂಡತಿಗೆ ಪಾಠ ಕಲಿಸಿ, ಗರ್ವಭಂಗಮಾಡಲು ಆತ ನಿಶ್ಚಯಿಸಿದನು. ಅಂದಿನಿಂದ ದಿನಾ ಊಟಕ್ಕೆ ಹೊತ್ತು ಮೀರಿ ಬರುತ್ತಿದ್ದನು. ಒಂದೊಂದು ಸಾರಿ ಮನೆಗೆ ಊಟಮಾಡಲು ಬರುತ್ತಲೇ ಇರಲಿಲ್ಲ. ಇದ್ದಕ್ಕಿದ್ದಂತೆ ಹೆಂಡತಿಗೆ ಹೇಳದೆಯೇ ನೆರೆ ಊರಿಗೆ ಎದ್ದುಬಿಡುವನು. ಎರಡು ಮೂರು ದಿನಗಳಾದ ನಂತರ ಮನೆಗೆ ಬರುವನು.

ತನ್ನ ಗಂಡನ ನಡವಳಿಕೆಯಿಂದ ಆಕೆಗೆ ತುಂಬಾ ತೊಂದರೆಯಾಗುತಿತ್ತು. ಆದರೂ

ಎಂ. ವಿಶಾಲಾಕ್ಷಿ

ಆಕೆ ತನ್ನ ಪತಿವ್ರತಾಧರ್ಮವನ್ನು ಹಲ್ಲುಬಿಗಿ ಹಿಡಿದು ಆಚರಿಸುತ್ತಾ ಅವಸ್ಥೆಪಡುತ್ತಿದ್ದಳು. ಯಾವ ಕೆಲಸದಮೇಲೆ ಹೋದರೂ ಊಟದ ಹೊತ್ತಿಗೆ ಸರಿಯಾಗಿ ಬಂದುಬಿಡುವಂತೆ ಗಂಡನನ್ನು ಪ್ರಾರ್ಥಿಸುವಳು.

ಒಂದುದಿನ ಬೆಳಗ್ಗೆ "ಲೇ, ಇಂದು ಭರ್ಜರಿ ಅಡಿಗೆ ಸಿದ್ಧಮಾಡು. ಒಂದಿಷ್ಟು ಪಾಯಸಬೇಕಾದರೆ ಮಾಡು. ಚೊಕ್ಕ ಭೋಜನ ಮಾಡಿ ಸುಮಾರು ದಿನಗಳಾದವು" ಎಂದ ಆಕೆಯ ಗಂಡ.

ಗಂಡನ ಮಾತು ಕೇಳಿ ಆಕೆಗೆ ತುಂಬಾ ಆನಂದವಾಯಿತು. ಆಕೆಯೂ ಸಹ ಸಂತೃಪ್ತಿಯಾಗಿ ಊಟಮಾಡಿ ಅನೇಕ ದಿನಗಳಾಗಿದ್ದವು. "ಊಟಕ್ಕೆ ತಡಮಾಡದೆ ಬಂದುಬಿಡಿ" ಎಂದು ಸಾರಿಸಾರಿ ಹೇಳಿದಳು. ತುಂಬಾ ಸಡಗರದಿಂದ ಅಡಿಗೆಮನೆಗೆ ಹೋಗಿ ತನಗೆ ಪ್ರಿಯವಾದ ಭಕ್ಷ್ಯಗಳನ್ನೂ, ವಡೆ ಪಾಯಸಗಳನ್ನೂ ಮಾಡಿ, ಗಂಡನ ಬರುವಿಕೆಗಾಗಿ ಎದುರುನೋಡುತ್ತಾ ಕುಳಿತಳು.

ಆದರೆ ಆತನು ಎಷ್ಟು ಹೊತ್ತಾದರೂ ಮನೆಗೆ ಬರಲಿಲ್ಲ. ತುಂಬಾಹೊತ್ತು ಮೀರಿ ನಿಧಾನವಾಗಿ ಆತನು ಮನೆಗೆ ಬಂದ.

"ತಡವೇಕೆ ಮಾಡಿದಿರಿ. ಸರಿ, ಕೈಕಾಲು ತೊಳೆದುಕೊಂಡು ಊಟಕ್ಕೆ ಬನ್ನಿ, ಎಲೆ ಹಾಕಿದ್ದೇನೆ" ಎಂದಳು ಹೆಂಡತಿ.

"ಲೇ, ಹೊಳೆಯಲ್ಲಿ ಸ್ನಾನಮಾಡಿಕೊಂಡು ಒಂದು ಕ್ಷಣದಲ್ಲಿ ಬಂದುಬಿಡುತ್ತೇನೆ" ಎಂದು ಹೇಳಿ ತುವಾಲನ್ನು ಹೆಗಲಮೇಲೆ ಹಾಕಿ



ಕೊಂಡು ಹೊರಗೆ ಹೊರಟುಬಿಟ್ಟ ಆತ. ಹಾಗೆ ಹೋದಾತನು ಎಷ್ಟು ಹೊತ್ತಾದರೂ ಹಿಂತಿರುಗಲಿಲ್ಲ. ಹೆಂಡತಿಗೆ ಒಂದುಕಡೆ ಹಸಿವಿನ ಬಾಧೆ ತಾಳಲಾಗದು. ಬಗೆಬಗೆಯ ಭಕ್ಷ್ಯಗಳನ್ನು ನೋಡಿಯಂತೂ ಆ ಬಾಧೆ ಮತ್ತಷ್ಟು ತೀವ್ರವಾಗುತಿತ್ತು.

ಎರಡು ತಾಸು ಕಳೆದಮೇಲೆ ಗಂಡ ಬಂದ. ಅಂತೂ ಬಂದರಲ್ಲಾ ಎಂದು ಆಕೆ ಸಂತಸಪಟ್ಟಳು. ಆದರೆ ಆತನು ನಡುಮನೆಯಲ್ಲಿ ಕಾಲಿಟ್ಟ ಕೂಡಲೇ ಕೆಳಗೆ ಕುಸಿದುಬಿದ್ದ. ತೇಲುಗಣ್ಣು ಹಾಕಿದ. ಆಕೆ ಆತನ ಮೈ ಮುಟ್ಟಲು, ಎರಡುಗಂಟೆಗಳ ಹೊತ್ತು ನೀರಿನಲ್ಲಿ ನೆನೆದ ಆತನ ಶರೀರ ತಣ್ಣಗಾಗಿತ್ತು.

ಗಂಡನು ಸತ್ತುಹೋದನೆಂದು ಆಕೆ ಭಾವಿಸಿದಳು. ಅತ್ತು ಕರೆದರೆ ನಾಲ್ಕು ಜನ ಬಂದು ಆತನು ಜೀವದಿಂದ ಇರುವುದೂ ಇಲ್ಲದಿರುವುದೂ ತಿಳಿಸಿಬಿಡುವರು. ಒಂದುವೇಳೆ ಪ್ರಾಣಪಕ್ಷಿಯೇ ಹಾರಿಹೋಗಿದ್ದರೆ ತನ್ನ ಬಾಯಿಗೆ ಮಣ್ಣುಬೀಳುತ್ತದೆ. ಮಾಡಿರುವ ಭಕ್ಷ್ಯಗಳನ್ನು ಮುಟ್ಟುವ ಹಾಗೆಯೂ ಇಲ್ಲ. ತಿನ್ನಬೇಕೆಂದರೆ ಗಂಡನ ನಿಜಸ್ಥಿತಿ ತಿಳಿಯುವ ಮೊದಲೇ ತಿಂದುಬಿಡಬೇಕು.

ಆಕೆ ತಕ್ಷಣ ಅಡಿಗೆಮನೆಗೆ ಹೋಗಿ ತನಗಿಷ್ಟವಾದ ಭಕ್ಷ್ಯಗಳನ್ನು ಎಲೆಗೆ ಹಾಕಿಕೊಂಡು, ಹೊಟ್ಟೆಬಿರಿಯುವಂತೆ ತಿಂದಳು. ಆಕೆ ಕೈ ತೊಳೆದುಕೊಂಡು ಬರುವವೇಳೆಗೆ ಗಂಡನು ಅದೇ ಸ್ಥಿತಿಯಲ್ಲಿದ್ದನು. ಅವಳು ಗಂಡನ ಪಕ್ಕದಲ್ಲಿ ಕುಳಿತು ಶೋಕಿಸಲು ಆರಂಭಿಸಿದಳು. ನೆರೆಹೊರೆಯವರು ಬಂದು 'ಏನು, ಏನಾಯಿತು' ಎಂದು ಕೇಳಿದರು. "ಮಾಡಿದ ಅಡಿಗೆಯನ್ನೂ ಊಟಮಾಡದೆ ಹೋಗಿಬಿಟ್ಟರಾ ನನ್ನ ಸರ್ವಸ್ವ" ಎಂದು ಗೋಳಿಟ್ಟಳು.

"ನಾನು ತಿನ್ನದಿದ್ದರೂ ಹೊಟ್ಟೆ ತುಂಬಾ ಉಂಡೆಯಲ್ಲೇ ನನ್ನ ರಾಣೀ" ಎಂದು ದೀರ್ಘವಾಗಿ ರಾಗ ಎಳೆಯುತ್ತಾ ಆಕೆಯ ಗಂಡ ತಟಕ್ಕನೆದ್ದು ಕುಳಿತನು.

ಅಂದಿನಿಂದ ಆಕೆ ಯಾರೊಂದಿಗೂ ಪಾತಿವ್ರತ್ಯವನ್ನು ಕುರಿತು ಚರ್ಚಿಸುವುದಾಗಲೀ, ಇತರ ಸ್ತ್ರೀಯರನ್ನು ಅವಹೇಳನ ಮಾಡುವುದಾಗಲೀ ಯಾರೂ ನೋಡಲಿಲ್ಲ.






## 14

[ಸಮರಸೇನನು ಶಿವದತ್ತನ ಭಟರೊಂದಿಗೆ ಆತನಿದ್ದ ಸ್ಥಳಕ್ಕೆ ಹೊರಟನಷ್ಟೆ. ಆತನು ಹಳ್ಳಿಯನ್ನು ಸಮೀಪಿಸುತ್ತಿರುವಾಗ ವ್ಯಾಘ್ರದತ್ತನ ಸೈನಿಕರು ಹಳ್ಳಿಯನ್ನು ಸುಟ್ಟುಹಾಕುತ್ತಿರುವುದು ಕಾಣಿಸಿತು. ಅಲ್ಲಿ ಶಿವದತ್ತನ ಭಟನೊಬ್ಬ ತಮ್ಮ ನಾಯಕನು ಓಡಿಹೋದನೆಂದು ಹೇಳಿದ. ಆತನಿಗಾಗಿ ಹೊರಟ ಸಮರಸೇನನು ಬೆಟ್ಟಗಳ ಮಧ್ಯೆ ಸಿಕ್ಕಿಕೊಂಡ. ತರುವಾಯ—]

ಸಮರಸೇನನು ಒಂದು ಭಾರಿಬಂಡೆಯ ಹಿಂದೆ ಅಡಗಿಕೊಂಡು ಆನೆಯ ಕಡೆ ನೋಡುತ್ತಿದ್ದನು. ಆತನ ಸಂಗಡ ಇದ್ದ ಸೈನಿಕರೂ ಸಹ ತಮ್ಮ ಪ್ರಾಣಗಳನ್ನು ಕೈಯಲ್ಲಿ ಬಿಗಿಹಿಡಿದುಕೊಂಡು ನಡುಗುತ್ತಿದ್ದರು. ಒಂದು ಭಾರೀ ಆನೆಗಳ ಸಮೂಹ ಆ ಸುರಂಗದಿಂದ ಹೊರಬಂದು ತಮ್ಮನ್ನು ನುಚ್ಚುನೂರಾಗಿ ತುಳಿದುಬಿಡಬಹುದೆಂದು ಅವರು ಭೀತರಾಗಿದ್ದರು. ಅವರು ತುಂಬಾ ಇಕ್ಕಟ್ಟಾದ ಸ್ಥಳದಲ್ಲಿ ಸಿಲುಕಿಕೊಂಡಿದ್ದರು. ಅಲ್ಲಿಂದ ಓಡಿಹೋಗುವುದಂತೂ ಸುಲಭವಾಗಿರಲಿಲ್ಲ. ಸುತ್ತಲೂ ಎತ್ತರವಾದ ಕಲ್ಲುಬಂಡೆಗಳು ಅಡ್ಡದಿಡ್ಡವಾಗಿದ್ದುವು. ಅಲ್ಲಿ ಹೀಗೆ ಭಯದಿಂದ ತಲ್ಲಣಿಸುತ್ತಿದ್ದ ಸೈನಿಕರಿಗೂ, ಸಮರಸೇನನಿಗೂ ಯಾರೋ ಕೆಲವರು ಗೋಳಾಡುತ್ತಿರುವ ಧ್ವನಿ ಕೇಳಿಸಿತು. ಅದು ಗುಹೆಯ ಮತ್ತೊಂದು ಕಡೆಯಿಂದ ಬರುತ್ತಿರುವಂತಿತ್ತು. ಆದರೆ ಅವರು ಅಡಗಿಕುಳಿತಿರುವ ಸ್ಥಳದಿಂದ ಹೊರಗೆ ಬರುವುದಾದರೂ ಹೇಗೆ?

ಆ ಆನೆಯು ಸುತ್ತಲೂ ಒಮ್ಮೆ ದೃಷ್ಟಿಸಿನೋಡಿ, ಆಕ್ರೋಶದಿಂದ ಘೀಂಕಾರ ಮಾಡುತ್ತಾ, ಸಮರಸೇನನೂ, ಸೈನಿಕರೂ ಆಗ





ಹೀಗೆಂದು ಹೇಳುತ್ತಿರುವಾಗಲೇ ಗುಹೆಯ ಆಚೆಕಡೆಯಿಂದ ಏನೋ ಗೊಂದಲವಾಗುತ್ತಿರುವಂತೆ ಚೀರಾಟ ಕೇಳಿಸಿತು.

ಸಮರಸೇನು ಇನ್ನು ಆಲೋಚಿಸಿ ಪ್ರಯೋಜನವಿಲ್ಲವೆಂದು ಭಾವಿಸಿದನು. "ಗುಹೆಯ ಆಚೆ ಕಡೆಯಿರುವವರು ಯಾವುದೋ ಪ್ರಮಾದಕ್ಕೊಳಗಾಗಿರಬೇಕು. ಅವರು ಶತ್ರುಗಳೋ ಮಿತ್ರರೋ, ಅದು ಬೇರೆ ವಿಷಯ. ನಾವೀಗ ಮುನ್ನುಗ್ಗಿ ಅಲ್ಲಿನ ವಿಷಯ ತಿಳಿದುಕೊಳ್ಳಬೇಕು" ಎಂದುಕೊಂಡ ಸಮರಸೇನ.

ಅವನು ತನ್ನ ಸಂಗಡಿಗರನ್ನು ಎಚ್ಚರಿಸಿ ಮುಂದೆ ನಡೆದನು. ಇಕ್ಕಟ್ಟಾದ ಗುಹೆಯಿಂದ ಸ್ವಲ್ಪದೂರ ನಡೆಯಲು ಆ ಗುಹೆಯ ದ್ವಾರದ ಪಕ್ಕದಲ್ಲೇ ಒಂದು ಕೊಳ ಕಾಣಿಸಿತು. ಆ ಕೊಳದಲ್ಲಿ ಬೇರು ಬಿಟ್ಟಿರುವ ಕೆಲವು ವೃಕ್ಷಗಳೂ, ಎತ್ತರವಾಗಿ ಬೆಳೆದಿರುವ ಬೆಂಡೂ ಇದ್ದುವು. ಮೂವರು ವ್ಯಕ್ತಿಗಳನ್ನು ಮೊಣಕಾಲಿನಷ್ಟು ಆಳವಾಗಿರುವ ಕೊಳದಲ್ಲಿದ್ದ ಕಂಬಗಳಿಗೆ ಬಂಧಿಸಲಾಗಿರುವುದು ಕಂಡುಬಂದಿತು. ಸಮರಸೇನನನ್ನು ನೋಡಿದ ಕೂಡಲೇ ಅವರು ಮತ್ತಷ್ಟು ಏರುಧ್ವನಿಯಲ್ಲಿ ಕೂಗಾಡಲು ಪ್ರಾರಂಭಿಸಿದರು.

ಇವರ ಸ್ಥಿತಿಗೆ ಕಾರಣವೇನೋ ಗೋತ್ತಾಗಲಿಲ್ಲ. ಕಂಭಗಳಿಗೆ ಕಟ್ಟಿಹಾಕಿರುವ ವ್ಯಕ್ತಿಗಳಿಗೆ ತಕ್ಷಣ ಪ್ರಮಾದವೇನೂ ಆಗುವಂತಿರಲಿಲ್ಲ. ಅವರ ಸುತ್ತುಮುತ್ತಲಾಗಲೀ ಯಾರೂ ಕಾಣಿಸಲಿಲ್ಲ. ತಮ್ಮನ್ನು ನೋಡಿಯೂ ಸಹ

ತಾನೇ ಬಂದಿದ್ದ ಗುಹೆಯೊಳಕ್ಕೆ ನುಗ್ಗಿತು. ಅದು ಜಲಪಾತದ ಮಾರ್ಗವಾಗಿ ಹೋಗುತ್ತಿರುವಂತೆ ನೀರಿನ ಸಪ್ಪುಳದಿಂದ ತಿಳಿದುಬಂತು.

ಸಮರಸೇನನು ಎಲ್ಲರಿಗಿಂತಲೂ ಮೊದಲು ತಾನು ಅಡಗಿದ್ದ ಸ್ಥಳದಿಂದ ಹೊರಗೆ ಬಂದನು. ಇತರ ಸೈನಿಕರೂ ಹೊರಬಂದು ಆತನನ್ನು ಸಮೀಪಿಸಿದರು. ಮತ್ತೊಂದು ಕಡೆಯಿಂದ ಆರ್ತನಾದ ಆಗಾಗ ಕೇಳಿಬರುತಿತ್ತು.

"ಯಾರೋ ಭಾರಿ ವಿಪತ್ತಿಗೊಳಗಾಗಿರುವಂತಿದೆ" ಎಂದ ಒಬ್ಬ ಸೈನಿಕ. "ಸಂದೇಹವೇ ಇಲ್ಲ. ಆದರೆ ಆನೆ ಹಠಾತ್ತನೆ ಅಲ್ಲಿಂದೇಕೆ ಓಡಿಬಂತು? ಬಹುಶಃ ಶತ್ರುಗಳು ಹೂಡಿರುವ ಸಂಚು ಇರಲಾರದಷ್ಟೆ! ಕೇಳಿಬರುತ್ತಿರುವುದು ಆರ್ತನಾದವೋ ಇಲ್ಲ..." ಸಮರಸೇನನು



ಅವರು ಆರೀತಿ ಬೊಬ್ಬಿಡುವ ಅರ್ಥವೇನು? ಸಮರಸೇನನಿಗೇನೂ ಅರ್ಥವಾಗಲಿಲ್ಲ; ಆತನು ಆಶ್ಚರ್ಯಗೊಂಡನು.

ಬಂಧಿಸಲಾಗಿದ್ದ ವ್ಯಕ್ತಿಗಳ ಬಳಿ ಸೇರ ಬೇಕೆಂದರೆ ಸಮರಸೇನನು ಕೊಳದಲ್ಲಿ ಇಳಿದು ತುಸ ದೂರ ಹೋಗಲೇ ಬೇಕು. ಕೊಳವು ಬಹಳಷ್ಟು ಆಳವಿಲ್ಲವೆಂದು ಅಲ್ಲಿಯೇ ಬೆಳೆ ದಿದ್ದ ಜೊಂಡೇ ಸಾರಿ ಹೇಳುತಿತ್ತು. ಸಮರ ಸೇನನು ಕತ್ತಿ, ಬಿಲ್ಲುಗಳನ್ನು ಸಿದ್ಧಮಾಡಿ ಮಡುವಿನಲ್ಲಿ ಇಳಿದ. ಸೈನಿಕರು ಅವನನ್ನು ಅನುಸರಿಸಿ ನಡೆಯುತ್ತಿದ್ದರು.

ಅವರು ಕೊಳದಲ್ಲಿ ಕೊಂಚದೂರ ನಡೆ ಯಲು, ಕಿವಿ ಕಿವುಡಾಗುವಂತೆ ಆ ಮೂವರು ವ್ಯಕ್ತಿಗಳು ಒಟ್ಟಿಗೆ ಕಿಟಾರನೆ ಕಿರಿಚಿ ಕೊಂಡರು. ಮರುಕ್ಷಣವೇ ಕೊಳವೆಲ್ಲಾ ಅಲ್ಲ ಕಲ್ಲೋಲವಾಗಿ ನೀರೆಲ್ಲಾ ನೊರೆಗಳೆದ್ದವು.

ಸಮರಸೇನನು ವಿಸ್ಮಯಗೊಂಡು ಹಾಗೇ ನೋಡುತ್ತಿದ್ದ. ಇದಿರಾಗಿ ದೊಡ್ಡದೊಂದು ಮೊಸಳೆ ಬಾಯಿ ತೆರೆದುಕೊಂಡು ಆತನ ಕಡೆಗೆ ನುಗ್ಗುತಿತ್ತು. ಕ್ಷಣಮಾತ್ರದಲ್ಲಿ ತನ್ನ ಅವಸ್ಥೆಯನ್ನು ಗ್ರಹಿಸಿದ ಸಮರಸೇನ. ಬಂಧಿತರು ಆ ಪರಿ ಗೊಂಡಲವೆಬ್ಬಿಸಲು ಈ ಭಯಂಕರವಾದ ಮೊಸಳೆಯೇ ಕಾರಣವೆಂದು ಅವರು ಗ್ರಹಿಸಿದರು. ಖಡ್ಗವನ್ನು ಒರೆಗೆ ಸೇರಿಸಿ, ಬಾಣವನ್ನು ಹೆದೆಗೊಳಿಸಿದ ಸಮರ ಸೇನ. ಮೊಸಳೆ ಬಾಯಿ ತೆರೆದುಕೊಂಡು ಮುಂದುಮುಂದಕ್ಕೆ ನುಗ್ಗುತಿತ್ತು. ಅದು ಸ್ವಲ್ಪ ಹತ್ತಿರ ಬರುವವರೆವಿಗೂ ಸುಮ್ಮನಿದ್ದ.






ಅದು ಸಮೀಪಕ್ಕೆ ಬಂದ ತಕ್ಷಣ ಸಮರಸೇನನು ತನ್ನ ಬಲವನ್ನೆಲ್ಲಾ ಪ್ರಯೋಗಿಸಿ ಬಾಣವನ್ನು ಅದರ ಮುಖಕ್ಕೆ ಗುರಿಯಿಟ್ಟು ಹೊಡೆದ. ಆ ಪೆಟ್ಟಿಗೆ ತಾಳಲಾರದೆ ಮೊಸಳೆ ನೀರಿನಲ್ಲಿ ಕ್ಷಣಕಾಲ ವಿಲವಿಲನೆಂದು ಒದ್ದಾಡಿ, ಆವೇಶದಿಂದ ಮತ್ತೆ ಮುಂದಕ್ಕೆ ಬರತೊಡಗಿತು. ಪ್ರಜ್ವಲಿಸುತ್ತಿದ್ದ ಅದರ ಕಣ್ಣಾಲಿಗಳನ್ನು ನೋಡಿದರೆ ಭಯವಾಗುತಲಿತ್ತು. ಸಮರಸೇನನು ತನ್ನ ಖಡ್ಗವನ್ನು ಹಿಡಿದು ಅದರಮೇಲೆ ಛಂಗನೆ ಹಾರಿ ಬೆನ್ನಿನ ಮೇಲೆ ಎರಡಾವರ್ತಿ ಬಲವಾಗಿ ತಿವಿದನು. ಮೊಸಳೆ ಆ ಆಘಾತಕ್ಕೆ ತಾಳಲಾರದೆ ನೀರಿನಲ್ಲಿ ಒದ್ದಾಡತೊಡಗಿತು. ಭಯಕಂಪಿತರಾಗಿ ನೋಡುತ್ತಿದ್ದ ಸೈನಿಕರಿಗೆ ಉಸಿರಾಡುವಂತಾಯಿತು.



ಅನಂತರ ಕಂಬಗಳಿಗೆ ಕಟ್ಟಿ ಹಾಕಲಾಗಿದ್ದ ವ್ಯಕ್ತಿಗಳ ಸಮೀಪಕ್ಕೆ ಹೋದ ಸಮರಸೇನ. ಅವರ ಬಳಿ ಸಾರಿದಕೂಡಲೇ ಸಮರಸೇನನಿಗೆ ಉಂಟಾದ ಆಶ್ಚರ್ಯ ಅಷ್ಟಿಷ್ಟಲ್ಲ. ವ್ಯಾಘ್ರದತ್ತನ ಭಟರಿಂದ ತಾನು ಬಂಧಿತನಾಗುವ ಮೊದಲು ತನ್ನೊಂದಿಗಿದ್ದ ಸೈನಿಕರೇ ಅವರಾಗಿದ್ದರು. ಆದರೆ ಅಲ್ಲಿ ಆಗ ನಾಲ್ಕು ಜನರ ಬದಲು ಮೂವರೇ ಇದ್ದರು.

ಆ ಸೈನಿಕರೂ ಸಹ ಅಮಿತಾಶ್ಚರ್ಯ ಹೊಂದಿದರು. ಅನಿರೀಕ್ಷಿತವಾಗಿ ಪ್ರಾಣರಕ್ಷಣೆಯಾದುದು ಮಾತ್ರವೇ ಅಲ್ಲದೆ, ತಮ್ಮ ನಾಯಕನೂಸಹ ಕಾಣಿಸಲು ಅವರು ಆನಂದಪರವಶರಾದರು. "ಸೇನಾಧಿಪತಿಯೇ ನಿಮ್ಮನ್ನು ಮತ್ತೆ ಕಾಣುವೆವೆಂಬ ಆಶೆ ನಮಗಿರಲೇ ಇಲ್ಲ," ಎಂದನೊಬ್ಬ ಸೈನಿಕ.

"ನಿಮ್ಮ ಸಂಗಡಿಗನೇನಾದನು?" ಸಮರಸೇನನು ದುಗುಡದಿಂದ ಕೇಳಿದ.

"ಸೇನಾನಿಯೇ, ಆತನನ್ನು ನೀವೀಗ ಕೊಂದ ಮೊಸಳೆ ಹೊಟ್ಟೆಯಲ್ಲಿ ಹಾಕಿಕೊಂಡಿತು. ನೀವು ಸಮಯಕ್ಕೆ ಸರಿಯಾಗಿ ಬಂದಿರಿ. ಇಲ್ಲದಿದ್ದರೆ ನಮಗೂ ಅದೇಗತಿ ಒದಗುತಿತ್ತು" ಎಂದ ಮತ್ತೊಬ್ಬ ಸೈನಿಕ.

"ನಿಮ್ಮನ್ನು ಈ ರೀತಿ ಬಂಧಿಸಿದವರು ಯಾರು?" ಎಂದು ಕೇಳಿದ ಸಮರಸೇನ.

ಸೈನಿಕರು ಅಂದಿನವರೆವಿಗೂ ನಡೆದುದನ್ನು ಸೂಕ್ಷ್ಮವಾಗಿ ವಿವರಿಸಿ ಹೇಳಿದರು. ತಮ್ಮ ನಾಯಕನನ್ನು ಹುಡುಕುತ್ತಾ ಗುಡ್ಡದ





ಗುಹೆಯ ರಹಸ್ಯದ್ವಾರದ ಮುಖಾಂತರ ಈ ಸ್ಥಳಕ್ಕೆ ಬಂದರು. ಅವರನ್ನು ಕಂಡಕೂಡಲೇ ವ್ಯಾಘ್ರದತ್ತನ ಭಟರು ಸೆರೆಹಿಡಿದು ತಮ್ಮ ನಾಯಕನ ಆಜ್ಞೆಯಂತೆ ಈ ಕೊಳದಲ್ಲಿದ್ದ ಮೊಸಳೆಗೆ ಆಹಾರವಾಗಿ ನೂಕಿದರು.

ನಮ್ಮನ್ನು ಅವರು ಇಲ್ಲಿ ಕೂಡಿಹಾಕಿ ಬಹಳ ಸಮಯವಾಗಿಲ್ಲ. ಆ ಪೊದರುಗಳ ಮರೆಯಿಂದ ನೋಡಿದರೆ ಅವರು ಹೋಗುತ್ತಿರುವ ಮಾರ್ಗ ಕಾಣಿಸುವುದು" ಎಂದ ಒಬ್ಬ ಸೈನಿಕ.

ಎಲ್ಲರೂ ಅಲ್ಲಿದ್ದ ಪೊದರುಗಳ ಎಡೆಯಿಂದ ನೋಡಿದರು. ವ್ಯಾಘ್ರದತ್ತನು ತನ್ನ ಸಂಗಡಿಗರೊಂದಿಗೆ ಕೈಬೀಸಿಕೊಂಡು ಠೀವಿಯಿಂದ ನಡೆಯುತ್ತಿರುವುದು ಅವರಿಗೆ ಕಾಣಿಸಿತು.

ಸಮರಸೇನನು ವ್ಯಾಘ್ರದತ್ತನ ಗುಂಪನ್ನು ಕಂಡು ಕಿಡಿಕಿಡಿಯಾದನು. ಅವಡುಕಚ್ಚಿದನು. ಆದರೆ ತನ್ನ ಹತ್ತಿರವಿದ್ದ ಸ್ವಲ್ಪಬಲದಿಂದಲೇ ಅವರಮೇಲೆ ಬೀಳುವುದು ಅಪಾಯಕರವಾಗಿತ್ತು. ಆದುದರಿಂದ ಕೂಡಲೇ ಶಿವದತ್ತನಿರುವ ಸ್ಥಳವನ್ನು ತಿಳಿದುಕೊಳ್ಳಬೇಕೆಂದು ನಿರ್ಧರಿಸಿದನು.

ಸಮರಸೇನನು ಈರೀತಿ ಆಲೋಚಿಸುತ್ತಿರುವಲ್ಲಿ ಒಬ್ಬ ಸೈನಿಕನು ಒಂದು ಮರದ ಕೊಂಬೆಯಕಡೆ ಕೈಮಾಡಿ "ಅದೇನೋ ಇದೆ ನೋಡಿ" ಎಂದು ಕೂಗಿದನು. ಒಂದು ಕೊಂಬೆಯ ಮೇಲೊಂದು ಕಾಗದ ನೇತಾಡುತಿತ್ತು. ಸಮರಸೇನನು ಅದನ್ನು ಕೈಗೆ ತೆಗೆದುಕೊಂಡು ಕುತೂಹಲದಿಂದ ಓದತೊಡಗಿದನು. ಅದರಲ್ಲಿ ಚಿಕ್ಕ ಒಕ್ಕಣೆ ಈರೀತಿ ಬರೆದಿತ್ತು: "ಇದು ಭಯಂಕರವಾದ ಸ್ಥಳ. ಬೇಗ ಈ ಪ್ರದೇಶವನ್ನುಬಿಟ್ಟು ಹೋಗಿ."

ಇದು ಶಿವದತ್ತನು ಕೊಟ್ಟಿರುವ ಎಚ್ಚರಿಕೆ ಎಂದು ಸಮರಸೇನನು ತಿಳಿದುಕೊಂಡನು. ಬಹಳ ತರಾತುರಿಯಲ್ಲಿ ಬರೆದಿರುವಂತೆ, ಆ ಸೊಟ್ಟಸೊಟ್ಟ ಅಕ್ಷರಗಳೇ ಹೇಳುತ್ತಿದ್ದವು.

ಸಮರಸೇನನು ಬಂದ ದಾರಿಗುಂಟ ಹಿಂದಿರುಗಲು ಮನಸ್ಸು ಮಾಡಿದನು. ಅದರೆ ಸೈನಿಕನೊಬ್ಬನು ಇನ್ನೊಂದು ಗುಹೆಯನ್ನು ತೋರಿಸುತ್ತಾ "ನೋಡಿ, ಈ ಗುಹೆಯಕಡೆ ಅನೇಕರು ಓಡಾಡಿರುವಂತಿದೆ" ಎಂದ.

ಸಮರಸೇನನು ಅತ್ತಕಡೆ ಸ್ವಲ್ಪದೂರ ಹೋಗಿ ಸೂಕ್ಷ್ಮವಾಗಿ ಪರಿಶೀಲಿಸಿದನು.







ಸೈನಿಕನು ಹೇಳಿದುದು ನಿಜವೆಂದು ತೋರಿತು. ಒಂದುವೇಳೆ ಶಿವದತ್ತನು ಈ ಮಾರ್ಗವಾಗಿಯೇ ಹೋಗಿರಕೂಡದೇತಕ್ಕೆ?

ಸಮರಸೇನನು ತನ್ನ ಅನುಯಾಯಿಗಳ ಸಂಗಡ ಆ ಗುಹೆಯನ್ನು ಸಮೀಪಿಸಿ ಒಳಗೆ ಇಣಿಕಿ ನೋಡಿದ. ಅಂಧಕಾರ ಕವಿದಿತ್ತು. ಸೈನಿಕರು ಪಂಜನ್ನು ಹಚ್ಚಿ ಆ ಬೆಳಕಿನಲ್ಲಿ ಮುಂದೆ ನಡೆದರು. ಅವರಿಗೆ ಕಾಣಿಸಿದ ದೃಶ್ಯ ಭಯಾಶ್ಚರ್ಯಗಳನ್ನುಂಟುಮಾಡಿದವು. ಕಡೆಕಲ್ಲಿನಲ್ಲಿ ಕೆತ್ತಿದ ಸಿಂಹಾಸನ. ಅದರ ಸುತ್ತಲೂ ಮಾನವಾಕಾರವಾದ ವಿಗ್ರಹಗಳಿವೆ! ಆ ವಿಗ್ರಹಗಳ ಮುಖಲಕ್ಷಣಗಳನ್ನೂ, ಧರಿಸಿದ್ದ ಆಯುಧಗಳನ್ನೂ ನೋಡಿದರೆ ಕಾಡುಜನರಂತೆ ಕಂಡುಬಂದರು.

"ಇದು ಯಾರೋ ಕಾಡುಜನರ ಸಮಾಧಿ ಸ್ಥಳವಿರಬಹುದು. ಏನೇ ಇರಲಿ, ನಾನೆಲ್ಲೂ ಇಂತಹ ಭಯಂಕರವಾದ ದೃಶ್ಯವನ್ನು ಕಂಡಿಲ್ಲ. ಈ ಕಾಡುಜನರ ಭೀಕರಾಕೃತಿಗಳನ್ನು ನೋಡುತ್ತಿದ್ದರೆ, ಏಕಾಕ್ಷಿಯನ್ನು ಕಂಡಾಗ ಆದ ಭೀತಿಗಿಂತಲೂ ಹತ್ತುಪಾಲು ಹೆಚ್ಚು ಭಯವಾಗುತ್ತಿದೆ" ಎಂದ ಸಮರಸೇನ.

ತಮ್ಮ ನಾಯಕನೇ ಈರೀತಿ ನುಡಿಯಲು ಆತನ ಸಂಗಡಿಗರು ಮತ್ತಷ್ಟು ಗಾಬರಿಗೊಂಡರು. ಅವರಲ್ಲಿ ಒಬ್ಬನು ಬಹಳವಾಗಿ ಹೆದರಿ ಹಿಂದಕ್ಕೆ ಓಡಲು ಪ್ರಾರಂಭಿಸಿದನು.

ಸಮರಸೇನನು ತಾನಾಡಿದ ದುಡುಕು ಮಾತುಗಳಿಗೆ ತುಂಬಾ ಪಶ್ಚಾತ್ತಾಪಪಟ್ಟನು.



ನಾಯಕನು ಎಂತಹ ಪರಿಸ್ಥಿತಿಯಲ್ಲೇ ಆಗಲಿ, ಭಯಹೊಂದಿದವನಂತೆ ಹೊರಗೆ ತೋರಿಸಿಕೊಳ್ಳುವುದು ಉಚಿತವಲ್ಲ.

ಸಮರಸೇನನು ಸೈನಿಕರಿಗೆ ಧೈರ್ಯ ಹೇಳಿ, ಗುಹೆಯ ದ್ವಾರದ ಕಡೆ ನಡೆದ. ಈ ಸ್ಥಳವನ್ನು ಆದಷ್ಟು ಬೇಗ ಬಿಡುವುದು ತಮಗೆ ಕ್ಷೇಮಕರವೆಂದು ತೋರಿತು. ಶಿವದತ್ತನು ಇರುವ ಸ್ಥಳವನ್ನು ತಿಳಿಯುವುದು ತುಂಬಾ ಅಗತ್ಯವಾಗಿತ್ತು. ಆದರೆ ಅದು ತುಂಬಾ ಕಷ್ಟಕರವಾಗಿ ಕಂಡುಬಂತು. ಶಿವದತ್ತನ ವಿಷಯವನ್ನು ಮೂಲೆಗೊತ್ತಿ ಮೊದಲು ತಾನು ಹೊರಟ ಸ್ಥಳಕ್ಕೆ ಹಿಂತಿರುಗಿಬಿಡೋಣವೆಂದು ಯೋಚಿಸಿದ. ಆದರೆ ಅಲ್ಲಿನ ಪರಿಸ್ಥಿತಿಗಳನ್ನು ನೆನೆಸಿಕೊಂಡರೆ ಅವೇನೂ ಅನುಕೂಲವಾಗಿರು



ವಂತೆ ತೋರಲಿಲ್ಲ. ಒಂದುಕಡೆ ಏಕಾಕ್ಷಿ ಮಾಂತ್ರಿಕನ ಕಾಟ, ಮತ್ತೊಂದುಕಡೆ ಕುಂಭಾಂಡನ ಹಿಂಸೆ. ಇಬ್ಬರೂ ಒಬ್ಬರನ್ನೊಬ್ಬರು ಮಿಂಚುವ ಕ್ರೂರ ಶತ್ರುಗಳು.

ಎಷ್ಟೇ ಅಪಾಯವಾದರೂ, ಕಷ್ಟವಾದರೂ ಶಿವದತ್ತನನ್ನು ಭೇಟಿ ಮಾಡುವುದು ಉತ್ತಮವೆಂದು ತೋರಿತು. ಏಕೆಂದರೆ: ದೇವೀ ಪ್ರಸಾದಿತವಾದ ತ್ರಿಶೂಲದ ವಿಷಯ ಆತನಿಗೆ ತಿಳಿದಿದೆ. ಏಕಾಕ್ಷಿ, ಚತುರ್ನೇತ್ರರ ಮುಖ್ಯ ಗುರುವಾದ ಶಾಕ್ತೇಯನದು ಆ ತ್ರಿಶೂಲ. ಆದುದರಿಂದ ಅದರ ಶಕ್ತಿಗೆ ಪ್ರತಿಯಿರುವುದಿಲ್ಲ.

ಆದರೆ ಶಿವದತ್ತನ ಧೋರಣೆ ಸಹ ಸಮರಸೇನನನ್ನು ಆಗಾಗ ಸಂದೇಹಕ್ಕೆ ನೂಕುತಿತ್ತು. ನಿಜವಾಗಿ ಆತನು ಮಿತ್ರನೇ ಇಲ್ಲ ಆರೀತಿ ನಟಿಸುತ್ತಿರುವನೋ ಆತನಿಗೆ ತಿಳಿಯದು!

'ನಾವೆಯಲ್ಲಿರುವ ಧನರಾಶಿಯನ್ನೂ, ಅದನ್ನು ಕಾಪಾಡುತ್ತಿರುವ ನಾಗಕನ್ಯೆಯ ವಿಷಯವನ್ನೂ ಇವರೆಲ್ಲರೂ ಅರಿತಿರುವ ಮಾತು ಸತ್ಯ. ಏಕಾಕ್ಷಿ ಮಾಂತ್ರಿಕ ಮತ್ತು ಚತುರ್ನೇತ್ರರುಮಾತ್ರವಲ್ಲದೆ ಅದಕ್ಕಾಗಿ ವ್ಯಾಘ್ರದತ್ತ ಶಿವದತ್ತರೂ ತಾಪತ್ರಯ ಪಡುತ್ತಿದ್ದಾರೆ! ಇವರೆಲ್ಲರ ಹೊಡೆದಾಟ ಬಡಿದಾಟಗಳ ನಡುವೆ ಅನಗತ್ಯವಾಗಿ ತಾನು ಕಷ್ಟಗಳಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಿರುವನು'

ಹೀಗೆ ಆಲೋಚಿಸುತ್ತಾ ಸಮರಸೇನನು ಗುಹೆಯಿಂದ ಹೊರಗೆಬಂದ. ಎತ್ತಕಡೆಗೆ ಹೋಗೋಣವೆಂದು ಆಲೋಚಿಸುತ್ತಿರುವಲ್ಲಿ ಜನರ ಅಬ್ಬರವು ಅವರಿಗೆ ಕೇಳಿಸಿತು. ಅದರೊಂದಿಗೆ ಬಾಣ ಮತ್ತು ಕವಣೆ ಕಲ್ಲುಗಳು ಮೇಲೆ ಬೀಳಲಾರಂಭಿಸಿದವು.

"ಶತ್ರುಗಳು ಮೇಲೆ ಬೀಳುವವರಿದ್ದಾರೆ; ಬಂಡೆಗಳ ಮರೆಗೆ ಓಡಿಹೋಗಿ" ಎಂದು ಆಜ್ಞೆಮಾಡಿ ಸಮರಸೇನನು ಕಣ್ಣಿಗೆ ಕಂಡ ಒಂದು ಬಂಡೆಯ ಮರೆಗೆ ಓಡಿದ. ಕೂಡಲೇ ಭೀಕರವಾಗಿ ಬೊಬ್ಬಿಡುತ್ತಾ ಬೆಟ್ಟಗಳ ಮೇಲಿಂದ ಶರವರ್ಷ ಸುರಿಸುತ್ತಾ ಅನೇಕ ಸೈನಿಕರು ಕಾಣಿಸಿಕೊಂಡರು. ಅವರು ಯಾರು? ವ್ಯಾಘ್ರದತ್ತನ ಪಕ್ಷದವರೇ, ಇಲ್ಲ ಕುಂಭಾಂಡನ ಸೈನಿಕರೇ?

[ಇನ್ನೂ ಇದೆ]





# ಸರಳ ಜೀವಿ

ಅನೇಕ ವರ್ಷಗಳ ಹಿಂದೆ ಒಬ್ಬ ರಾಜನಿದ್ದ. ಆತನಿಗೆ ಸಕಲ ಭೋಗಭಾಗ್ಯಗಳಿದ್ದುವು. ದೇಶ ಸುಭಿಕ್ಷವಾಗಿತ್ತು. ಪ್ರಜೆಗಳಲ್ಲಿ ಅಶಾಂತಿ ಎಳ್ಳಷ್ಟೂ ಇರಲಿಲ್ಲ. ಆದರೂ ತನಗೆ ಸಾಕಷ್ಟು ಸುಖವಿಲ್ಲವೆಂಬ ಸಂದೇಹ ರಾಜನಲ್ಲಿ ಮೂಡಿತ್ತು. "ತನಗಿಂತಲೂ ಸುಖಿಯಾಗಿರುವ ಮಾನವರು ಈ ರಾಜ್ಯದಲ್ಲಿರುವರೇ?" ಎಂದು ರಾಜನು ತನ್ನ ಮಂತ್ರಿ ಸಾಮಂತರನ್ನು ಅಡಿಗಡಿಗೆ ಕೇಳುವನು.

"ಮಹಾಸ್ವಾಮಿ, ಅದು ಅಸಂಭವ. ಈ ರಾಜ್ಯದಲ್ಲೇ ಅಲ್ಲ, ಭೂಮಂಡಲದಲ್ಲೇ ತಮಗಿಂತಲೂ ಸುಖಿಗಳು ಇರಲು ಸಾಧ್ಯವಿಲ್ಲವೆಂದು ಹೇಳಿದರೆ ನಂಬಿ" ಎಂದು ಸಮಾಧಾನ ಹೇಳುತ್ತಿದ್ದರು. ರಾಜನಿಗೆ ಈ ಸಮಾಧಾನ ತೃಪ್ತಿಗೊಳಿಸಲಿಲ್ಲ. ಆತನೊಂದುದಿನ ವೇಷಧಾರಿಯಾಗಿ ಸಮೀಪದಲ್ಲೇ ಇದ್ದ ಒಂದು ಹಳ್ಳಿಯಲ್ಲಿ ಸಂಚಾರ ಮಾಡುತ್ತಿರಲು, ಒಂದು ಗುಡಿಸಲಿನಿಂದ ತಂಬೂರಿಯಧ್ವನಿ, ಹಾಡು ಕೇಳಿಬಂದವು. "ಹಾಗೆ ಹಾಡುತ್ತಿರುವವನು ಬಡವನೇ ಆಗಿರಬಹುದು. ಆದರೆ ಅವನು ನನಗಿಂತಲೂ ನಿಶ್ಚಿಂತನಾಗಿರುವಂತೆ ಭಾಸವಾಗುತ್ತದೆ. ನಾನು ಆರೀತಿ ನಿಶ್ಚಿಂತೆಯಾಗಿ ಹಾಡಿಕೊಳ್ಳಲಾರೆ" ಎಂದು ಗುಡಿಸಿಲಿನೊಳಕ್ಕೆ ಇಣಿಕಿ ನೋಡಿದ ರಾಜ.

ಗುಡಿಸಲಿನಲ್ಲೊಂದು ಸಣ್ಣ ಹಣತೆ ಉರಿಯುತಿತ್ತು. ಸುಮಾರು ರಾಜನ ವಯಸ್ಸಿನಷ್ಟೇ ಇದ್ದ ಯುವಕನೊಬ್ಬನು ಚಾಪೆಯ ಮೇಲೆ ಕುಳಿತು ತಂಬೂರಿ ಮಿಾಟುತ್ತಾ ಆನಂದಪರವಶನಾಗಿ ಉಚ್ಚ ಸ್ವರದಲ್ಲಿ ಹಾಡುತ್ತಿದ್ದನು. ಮಾರುವೇಷದಲ್ಲಿದ್ದ ರಾಜನನ್ನು ಕಂಡಕೂಡಲೇ "ಬಾ ಅಣ್ಣಾ, ಒಳಗೆ ಬಂದು ಕೂಡು" ಎಂದು ಆಹ್ವಾನಿಸಿದನು. ರಾಜನು ಬಂದು ಕುಳಿತುಕೊಂಡು "ತುಂಬಾ ಆನಂದದಲ್ಲಿರುವಂತಿದೆ. ನಿನಗೇನೂ ಚಿಂತೆಯಿಲ್ಲವೇ? ನಿನ್ನ ಜೀವನ ಹೇಗೆ ಸಾಗಿಸುವೆ?" ಎಂದು ಕೇಳಿದ.

"ನನಗೆ ಯಾವ ವಿಧವಾದ ಚಿಂತೆಯೂ ಇಲ್ಲ. ದಿನಾ ಮುಂಜಾನೆ ಎದ್ದು ನಗರಕ್ಕೆ ಹೋಗುತ್ತೇನೆ. ಬೀದಿಬೀದಿ ಅಲೆಯುತ್ತೇನೆ.

ಎಸ್. ಶಾಂತಕುಮಾರಿ




ಪಾತ್ರೆಗಳಿಗೆ ಕಲಾಯಿ ಪೂಸುತ್ತೇನೆ. ನಾಲ್ಕು
ಕಾಸು ಸಂಪಾದಿಸಿಕೊಂಡು ನನಗೆ ಆವಶ್ಯಕ
ವಾದ ವಸ್ತು ಸಾಮಗ್ರಿಗಳನ್ನು ಕೊಂಡುಕೊಳ್ಳು
ತ್ತೇನೆ. ಮನೆಗೆ ಬಂದು ಅಡಿಗೆ ಮಾಡಿಕೊಂಡು
ತಿಂದು ನಿದ್ರೆಬರುವವರೆವಿಗೂ ಹೀಗೆ ಹಾಡಿ
ಕೊಳ್ಳುತ್ತಿರುವೆನು. ನಾನು ಯಾರನ್ನೂ ದ್ವೇಷಿಸ
ಬೇಕಾಗಿಲ್ಲ. ಅಂತೆಯೇ ನನ್ನನ್ನು ಯಾರೂ
ಕಾಪಾಡುವ ಅಗತ್ಯವಿಲ್ಲ. ಹಣ ಕೂಡಿಡಲೇ
ಬೇಕೆಂಬ ಹಂಬಲವೂ ನನಗಿಲ್ಲ. ನನಗೇತರ
ಚಿಂತೆ?'' ಎಂದು ಹೇಳಿದ ಹಾಡುಗಾರ.

ರಾಜನು ಅಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು,
ನಂತರ ತನ್ನ ಅರಮನೆಗೆ ಬಂದು ಬಿಟ್ಟನು.
ಆತನ ಮನಸ್ಸಿನಲ್ಲಿ ಆ ಹಾಡುಗಾರನದೇ
ಯೋಚನೆ. ಪ್ರತಿಯೊಬ್ಬರೂ ತಮ್ಮ ಸಾಮಾನು
ಗಳ ರಿಪೇರಿ ಅಥವಾ ಕಲಾಯಿ ಮಾಡಿಸಬೇಕಾ
ದರೆ ಅರಮನೆಗೆ ಸೇರಿದ ಕಾರ್ಖಾನೆಯಲ್ಲೇ
ಮಾಡಿಸಿಕೊಳ್ಳಬೇಕೆಂತಲೂ, ಬೀದಿಯಲ್ಲಿ
ಬರುವ ಕಲಾಯಿ ಪೂಸುವವರ ಹತ್ತಿರ ಮಾಡಿಸ
ಬಾರದೆಂತಲೂ ಮಾರನೆಯದಿನ ಒಂದು ಅಜ್ಞೆ
ಜಾರಿಮಾಡಿದ. ಅಂದು ನಗರಕ್ಕೆ ಬಂದ
ಹಾಡುಗಾರನಿಗೆ ಒಂದು ಬಿಡಿಗಾಸೂ ಸಂಪಾ
ದನೆಯಾಗಲಿಲ್ಲ. ಅವನು ಬೀದಿಯಲ್ಲಿ ಆಲೋ
ಚಿಸುತ್ತಾ ಹೋಗುತ್ತಿದ್ದ. ಆಗ ಒಂದು ಮನೆಯ
ಮುಂದೆ ಮಹನೀಯರೊಬ್ಬರು ಕಾಣಿಸಿದರು.
ಅವರು ಕಟ್ಟಿಗೆ ಸೀಳುತ್ತಿದ್ದರು. ಹಾಡು
ಗಾರನು ಅವರನ್ನು ಸಮೀಪಿಸಿ "ಸ್ವಾಮಿ,
ನಿಮಗೇಕೆ ಈ ಕಷ್ಟ. ನಾನು ಸೌದೆ ಸೀಳಿ
ಕೊಡುತ್ತೇನೆ. ನನ್ನ ಕಷ್ಟಕ್ಕೆ ತಕ್ಕಂತೆ ಕೂಲಿ
ಕೊಡಿ'' ಎಂದ. "ಕೂಲಿಯವರ್‍ಯಾರೂ ಸಿಕ್ಕದೆ
ನಾನೇ ಈ ಕೆಲಸಕ್ಕೆ ಇಳಿಯಬೇಕಾಯಿತು''
ಎಂದು ಹೇಳುತ್ತಾ ಕೊಡಲಿಯನ್ನು ಹಾಡು
ಗಾರನಿಗೆ ಕೊಟ್ಟರು.

ಅಂದಿನಿಂದ ಹಾಡುಗಾರನು ದಿನಾ ನಗ
ರಕ್ಕೆ ಬಂದು, ಮನೆಮನೆಗೆ ಹೋಗಿ, ಸೌದೆ
ಸೀಳಿ, ತನಗೆ ಸಾಕಾಗುವಷ್ಟು ಹಣಗಳಿಸಿದ
ಕೂಡಲೇ ಮನೆಗೆ ಹಿಂತಿರುಗಿ, ಅಡಿಗೆಮಾಡಿ
ಕೊಂಡು ನಿಶ್ಚಿಂತೆಯಾಗಿ ತಂಬೂರಿ ನುಡಿ
ಸುತ್ತಾ ದಿನಕಳೆಯಲಾರಂಭಿಸಿದನು.

ಅವನ ಸ್ಥಿತಿ ಈಗ ಹೇಗಿರುವುದೋ ತಿಳಿದು
ಕೊಳ್ಳಲು ಒಂದುದಿನ ಸಾಯಂಕಾಲ ಮಾರು
ವೇಷದಲ್ಲಿ ರಾಜನು ಹಾಡುಗಾರನ ಗುಡಿಸಲಿಗೆ

ಹೋದ. ಎಂದಿನಂತೆ ಯಥಾಪ್ರಕಾರ ಹಾಡು ಕೇಳಿಬರುತ್ತಿತ್ತು. ಆಶ್ಚರ್ಯಪಟ್ಟ ರಾಜ. ಗುಡಿಸಲಿಗೆ ಪ್ರವೇಶಿಸಿ, ನಡೆದ ವಿಷಯವನ್ನೆಲ್ಲಾ ಕೇಳಿ ತಿಳಿದುಕೊಂಡ. ಆಗ ನಿರ್ವಿಚಾರಿಯಾಗಿರಲು ದೇಹ ದುಡಿಸುವುದೇ ಕಾರಣವಿರಬಹುದೆಂದು ಭಾವಿಸಿ, ತನ್ನ ಅನುಮಾನವನ್ನು ದೃಢಪಡಿಸಿಕೊಳ್ಳಲು ಒಂದು ಉಪಾಯ ಹೂಡಿದ ರಾಜ.

ಮಾರನೆಯ ದಿನ ಬೆಳಗ್ಗೆ ರಾಜಭಟರು ಹಾಡುಗಾರನಿದ್ದ ಗುಡಿಸಲಿಗೆ ಬಂದು ತಳವಾರಿ ಕರೆಯುತ್ತಿರುವನೆಂದು ಹೇಳಿದರು. ಪ್ರತಿ ಕೇಳದೆ ಹಾಡುಗಾರನು ಅವರೊಂದಿಗೆ ತಳವಾರನ ಬಳಿಗೆ ಹೋದ. ತಳವಾರನು ಅವನನ್ನು ಕುರಿತು "ನಿನ್ನನ್ನು ರಾಜಭಟನನ್ನಾಗಿ ನೇಮಿಸಬೇಕೆಂದು ರಾಜಾಜ್ಞೆಯಾಗಿದೆ. ಕೂಡಲೇ ನೀನು ಅರಮನೆಗೆಹೋಗಿ ಕೆಲಸದ ಮೇಲೆ ಹಾಜರಾಗಬೇಕು" ಎಂದ.

ಹಾಡುಗಾರನು ಆಸ್ಥಾನಕ್ಕೆ ಹೋಗಿ ತನಗೆ ನೌಕರೀ ಬೇಕಿಲ್ಲವೆಂದು ಅರಿಕೆ ಮಾಡಿಕೊಂಡ. ಆದರೆ ಪ್ರಯೋಜನವಿಲ್ಲವಾಯಿತು. ಪ್ರತಿಯಾಗಿ ಅವನಿಗೆ ರಾಜಭಟರು ಧರಿಸುವ ಉಡುಪು, ರುಮಾಲು ಖಡ್ಗ ಇತ್ಯಾದಿಗಳನ್ನು ಕೊಟ್ಟರು.

ಈ ಹೊಸ ಉದ್ಯೋಗದಲ್ಲಿ ಹಾಡುಗಾರನಿಗೆ ತಿಂಗಳಿಗೊಂದು ಸಾರಿ ಸಂಬಳ ಬರುತ್ತದೇ ಹೊರತು ದಿನಗೂಲಿ ಬರುವಂತಿಲ್ಲ. ಆದುದರಿಂದ ಆತನು ಒಬ್ಬ ವರ್ತಕನ ಸಮೀಪಕ್ಕೆ ಹೋಗಿ ತನ್ನ ಖಡ್ಗವನ್ನು ಅಡವಿಟ್ಟು ದಿನಾ ತನಗೆ ಅವಶ್ಯಕವಾದಷ್ಟು ಹಣವನ್ನು ವರ್ತ





ಕನು ಕೊಡುವಂತೆಯೂ, ಸಂಬಳ ಬಂದ ಕೂಡಲೇ ಬಾಕೀ ತೀರಿಸುವುದೆಂತಲೂ ಒಂದು ಬಗೆಯ ಒಪ್ಪಂದಕ್ಕೆ ಬಂದ. ಆದರೆ ಕತ್ತಿಯಿಲ್ಲದ ಒರೆಯ ಗುಟ್ಟು ಬಯಲಾಗದಂತೆ ಒಂದು ಉಪಾಯ ಹೂಡಿದ. ಬಡಗಿಯೊಬ್ಬನ ಬಳಿಗೆ ಹೋಗಿ ಮರದಿಂದ ಒಂದು ನಕಲು ಖಡ್ಗವನ್ನು ಮಾಡಿಸಿ, ಅದನ್ನು ಒರೆಯಲ್ಲಿಟ್ಟುಕೊಂಡು ತಿರುಗಾಡುತ್ತಿದ್ದನು.

ಸ್ವಲ್ಪ ದಿನಗಳನಂತರ ರಾಜನು ಮಾರುವೇಷದಲ್ಲಿ ಮತ್ತೊಮ್ಮೆ ಗುಡಿಸಲಿನ ಕಡೆ ಹೋದ. ಗುಡಿಸಿಲಿನಿಂದ ಮುಂಚಿನ ಕಂಠಸ್ವರವೇ ಕೇಳಿಬರುತಿತ್ತು. "ಎಲಾ, ಇವನಿನ್ನೂ ನಿಶ್ಚಿಂತೆಯಾಗಿಯೇ ಇದ್ದಾನೆ. ಬಹುಶಃ ನಾನು ಪ್ರಜೆಗಳನ್ನು ದಂಡಿಸುವೆನಾದುದರಿಂದ ನನಗೆ ಚಿಂತೆಯಾಗಿರಬಹುದು. ಇವನು ಯಾರನ್ನಾದರೂ ದಂಡಿಸುವಂತೆ ಮಾಡಿನ್ನೋಡಬೇಕು" ಎಂದು ನಿಶ್ಚಯಿಸಿಕೊಂಡ.

ಮರುದಿನ ಹಾಡುಗಾರನು ವಧಸ್ತಂಭದ ಬಳಿ ಹಾಜರಿರಬೇಕೆಂದು ಆಜ್ಞೆಯಾಯಿತು. ಅವನು ಅಲ್ಲಿಗೆ ಹೋಗುವ ವೇಳೆಗೆ ಸ್ತಂಭದ ಬಳಿ ಒಬ್ಬ ಕೈದಿಯಿದ್ದ. ಅವನ ಪಕ್ಕದಲ್ಲೇ ತರಳವಾರನು ನಿಂತಿದ್ದ. ಕೈದಿಯ ಶಿರಚ್ಛೇದವನ್ನು ನೋಡಲು ಸಹಸ್ರಾರುಜನ ಅಲ್ಲಿಬಂದು ನೆರೆದಿದ್ದಾರೆ. "ಈ ಕೈದಿಗೆ ಮರಣದಂಡನೆ ವಿಧಿಸಲಾಗಿದೆ. ನಿನ್ನ ಖಡ್ಗದಿಂದ ಅವನ ತಲೆ ಹಾರಿಸು" ಎಂದು ತಳವಾರನು ಹಾಡುಗಾರನಿಗೆ ಆಜ್ಞಾಪಿಸಿದ.

ಹಾಡುಗಾರನು ಸಂದಿಗ್ಧದಲ್ಲಿ ಸಿಲುಕಿದ. ಮರದ ಖಡ್ಗದಿಂದ ಮಾನವನ ತಲೆ ಕಡಿಯುವುದೆಂತು? "ಸ್ವಾಮಿ, ಈತನು ಯಾವ ತಪ್ಪು ಮಾಡಿರುವನೋ ನಾನರಿಯೆ. ಈ ಕಾರ್ಯ ನನಗೇಕೆ ಹಚ್ಚಿದಿರಿ! ಮತ್ತೆ ಯಾರಿಗಾದರೂ ಈ ಕೆಲಸ ವಹಿಸಿ" ಎಂದು ಅವನು ತಳವಾರನನ್ನು ಪ್ರಾರ್ಥಿಸಿದನು.

"ಅವನ ತಪ್ಪಿನಿಂದ ನಿನಗೇನು ಕೆಲಸ. ನೀನೇ ಅವನ ತಲೆ ಕಡಿಯಬೇಕೆಂದು ಮಹಾರಾಜರು ಅಪ್ಪಣೆ ಕೊಡಿಸಿದ್ದಾರೆ. ತಲೆ ಹಾರಿಸುವುದು ನಿನ್ನ ವಿಧಿ, ಕರ್ತವ್ಯ" ಎಂದು ತೀಕ್ಷ್ಣವಾಗಿ ನುಡಿದ ತಳವಾರ.

ಇನ್ನು ತಪ್ಪಿಸಿಕೊಳ್ಳಲು ಮಾರ್ಗವಿಲ್ಲ. ಹಾಡುಗಾರನು ಕಣ್ಣು ಮುಚ್ಚಿಕೊಂಡು,

ಆಕಾಶದ ಕಡೆ ತಲೆ ಎತ್ತಿ, ಕೈ ಜೋಡಿಸಿ "ಹಾ! ಪರಮಾತ್ಮ! ನಾನೊಂದು ಘೋರ ಕಾರ್ಯ ಮಾಡಲಿದ್ದೇನೆ. ಈ ಕೈದಿ ನಿರ್ದೋಷಿಯಾದ ಪಕ್ಷಕ್ಕೆ ನನ್ನ ಖಡ್ಗವು ಮರದ ಖಡ್ಗವಾಗಿ ಬದಲಾಯಿಸುವಂತಾಗಲಿ. ನನ್ನನ್ನು ಈ ಪಾಪಕಾರ್ಯದಿಂದ ಮುಕ್ತನನ್ನಾಗಿ ಮಾಡು" ಎಂದು ಕೂಗಿ ಪ್ರಾರ್ಥನೆ ಮಾಡಿ, ಒರೆಯಿಂದ ಖಡ್ಗವನ್ನು ಎಳೆದ.

ಹಾಡುಗಾರನು ಹೊರಕ್ಕೆ ಎಳೆದ ಖಡ್ಗ ಮರದ ಕರಿವಾಳವಾಗಿರುವುದನ್ನು ಕಂಡು ಜನ ಕ್ಷಣಹೊತ್ತು ವಿಸ್ಮಯಗೊಂಡರು; ದಿಗ್ಭ್ರಾಂತರಾದರು. ಆ ತರುವಾಯ "ಕೈದಿ ನಿರಪರಾಧಿ, ನಿರ್ದೋಷಿ" ಎಂದು ಜನಸಮೂಹ ಕೂಗಿಕೊಂಡಿತು. ತಳವಾರನು ಬೆರಗಾಗಿ ನೋಡುತ್ತಾ ನಿಂತುಬಿಟ್ಟ. ಅಷ್ಟರಲ್ಲಿ ಜನ ಮುಂದೆ ನುಗ್ಗಿದರು. ಕೆಲವರು ಹಾಡುಗಾರನ ಪಾದಗಳಮೇಲೆ ಬಿದ್ದರು. "ಧರ್ಮಸ್ವರೂಪ, ಮಹಾತ್ಮ, ಮಹಾಪುರುಷ" ಎಂದರು. ಮತ್ತೆ ಕೆಲವರು ಓಡಿಹೋಗಿ ಕೈದಿಯ ಕಟ್ಟುಗಳನ್ನು ಬಿಚ್ಚಿದರು.

ಕೈದಿ ನಿರ್ದೋಷಿ ಎಂತಲೂ ರಾಜಭಟನು ಮಹಾತ್ಮನೆಂತಲೂ ಜನರು ಮಾತನಾಡಿಕೊಳ್ಳ ಹತ್ತಿದರು. ತಳವಾರನು ಅಸಹಾಯಕನಾಗಿ ರಾಜನಬಳಿಗೆ ಹೋಗಿ ಮನವಿ ಮಾಡಿಕೊಂಡನು. ರಾಜನಿಗೆ ಆಶ್ಚರ್ಯವೂ, ಅನುಮಾನವೂ ಉಂಟಾಯಿತು. ಆತನು ಹಾಡುಗಾರನನ್ನು ತನ್ನ ಬಳಿಗೆ ಬರಮಾಡಿಕೊಂಡು, ಯಾವದ್ವಿಷಯವನ್ನೂ ಹೇಳುವಂತೆ ಆಜ್ಞಾಪಿಸಿದ. ಹಾಡುಗಾರನು ಬಹು ವಿನಯದಿಂದ ತಾನು ಖಡ್ಗವನ್ನು ಅಡವಿಟ್ಟ ವಿಷಯವನ್ನು ಮರೆಮಾಚದೆ ತಿಳಿಸಿದನು.

ರಾಜನು ಅವನ ಯುಕ್ತಿಗೆ ತಲೆದೂಗಿ, ಸ್ವಲ್ಪ ಹಣವನ್ನು ಕೊಟ್ಟು "ಎಲೈ, ನಾವು ಇನ್ನುಮುಂದೆ ನಿನ್ನನ್ನು ತೊಂದರೆಪಡಿಸುವುದಿಲ್ಲ. ನಿನ್ನಿಷ್ಟಬಂದಂತೆ ಜೀವಿಸು. ನಾನಡ್ಡಿ ಬರುವುದಿಲ್ಲ" ಎಂದು ಅಭಯವನ್ನಿತ್ತು ಹಾಡುಗಾರನನ್ನು ಕಳುಹಿಸಿಬಿಟ್ಟನು. ಯಾರ ತಂಟೆಗೂ ಹೋಗದೆ ತನ್ನಪಾಡಿಗೆ ತಾನು ಜೀವಿಸಿಕೊಂಡಿದ್ದರೆ ಯಾವ ಚಿಂತೆಯೂ ಇರಲಾರದೆಂದು ರಾಜನು ಗ್ರಹಿಸಿದನು.





# ಪಂಡಿತ ಪುತ್ರ

ಒಂದಾನೊಂದು ಕಾಲದಲ್ಲಿ ಪ್ರದೀಪನು ಪ್ರಯಾಗ ನಗರದ ರಾಜನಾಗಿದ್ದನು. ಆತನ ಆಸ್ಥಾನದಲ್ಲಿ ಪಂಡಿತರನೇಕರಿದ್ದರು. ಅವರಲ್ಲಿ ಕೆಲವರು ತಲಾಂತರಗಳಿಂದ ಆಸ್ಥಾನ ಪಂಡಿತರಾಗಿದ್ದರು. ಅಂತಹರಲ್ಲಿ ಬದರಿಪ್ರಸಾದ್ ಎಂಬಾತನೊಬ್ಬ.

ಬದರಿಪ್ರಸಾದನ ತಂದೆ, ತಾತ, ಮುತ್ತಾತಂದಿರು ಘನ ವಿದ್ವಾಂಸರು. ಅವರೆಲ್ಲರೂ ಪ್ರಯಾಗ ನಗರದ ಆಸ್ಥಾನ ಪಂಡಿತರಾಗಿದ್ದರು. ಆದರೆ ಬದರಿಪ್ರಸಾದನು ಮಾತ್ರ ಕೇವಲ ಪಂಡಿತ ಪುತ್ರನಾದ. ಅಂದರೆ ಶುದ್ಧ ಶುಂಠ. ವರ್ಷಾನುಗಟ್ಟಲೆ ಕಿವಿಗೊಟ್ಟು ಕೇಳುತ್ತಿದ್ದನಾದುದರಿಂದ ಆತನಿಗೆ ಅನೇಕ ಶ್ಲೋಕಗಳು ಬಾಯಿಪಾಠವಾಗಿತ್ತೇ ಹೊರತು ಸ್ವಲ್ಪವಾದರೂ ಪ್ರಪಂಚಜ್ಞಾನವಿರಲಿಲ್ಲ. ಮೂಢರಲ್ಲಿ ಅತಿ ಮೂಢ. ಈ ವಿಷಯವನ್ನು ರಾಜನು ಅರಿಯನು. ಆದರೆ ಇತರ ಪಂಡಿತರು ಸುಲಭವಾಗಿ ಕಂಡುಕೊಂಡಿದ್ದರು. ಅಂತಹ ಮೂಢನಿಗೂ ತಮ್ಮೊಂದಿಗೆ ಸರಿಸಮಾನವಾದ ಸ್ಥಾನವನ್ನು ಕೊಟ್ಟಿರುವುದು ಅವರಿಗೆ ರುಚಿಸಲಿಲ್ಲ. ಅದರಿಂದ ಅವರು ರಾಜನಲ್ಲಿಗೆ ಹೋಗಿ "ಮಹಾಪ್ರಭೂ, ಬದರಿಪ್ರಸಾದನು ಪ್ರಪಂಚಜ್ಞಾನವಿಲ್ಲದ ತಿಳಿಗೇಡಿ; ಆತನಿಗೆ ಆಸ್ಥಾನದಲ್ಲಿ ಸ್ಥಳ ಕೊಡುವುದು ಆಸ್ಥಾನಕ್ಕೇ ಕಳಂಕಪ್ರಾಯವಾಗಿದೆ. ಆತನ ಚತುರತೆಯನ್ನು ತಾವೇ ಪರೀಕ್ಷೆ ಮಾಡಬಹುದು" ಎಂದು ಚಾಡಿ ಹೇಳಿದರು.

ಪ್ರದೀಪನು ವಿಸ್ಮಯ ಹೊಂದಿದ. ಏಕೆಂದರೆ ಬದರಿಪ್ರಸಾದನ ತಂದೆ ದಿಗ್ಗಜನಂತಹ ಪಂಡಿತ. ಆತನು ಮರಣಹೊಂದಿದ ಕೂಡಲೇ ಆ ಸ್ಥಾನವು ಬದರಿಪ್ರಸಾದನಿಗೆ ಲಭಿಸಿತು. ಆತನು ಎಳೆದುಕೊಂಡಿರುವ ವಿಭೂತಿ ಪಟ್ಟೆಗಳು, ಹೊದೆದುಕೊಂಡಿರುವ ಶಾಲು, ಕಿವಿಯಲ್ಲಿರುವ ಕುಂಡಲಗಳು, ಇವನ್ನೆಲ್ಲಾ ನೋಡಿದರೆ ಭವ್ಯಮೂರ್ತಿಯಂತೆ ಕಾಣಿಸುವನು. ಪಂಡಿತೋತ್ತಮನಂತೆ ತೋರುವನು.

ಈ ವಿಷಯವನ್ನು ಪರೀಕ್ಷಿಸಲು ಒಂದು ದಿನ ರಾಜನು ತುಂಬಿದ ಸಭೆಯಲ್ಲಿ, ಅವನನ್ನು ಕುರಿತು : " ಪಂಡಿತೋತ್ತಮನೇ, ಕೆಲವರು

ಕೆ. ಎಲ್. ಹುಬಳೀಕರ್

ಆನೆಗಳನ್ನು ಹಿಡಿಯುತ್ತಿರುವುದನ್ನು ಕಂಡೆ. ಅವರಿಗೆ ಆನೆಗಳಿಂದ ಆಗುವ ಪ್ರಯೋಜನ ವೇನೋ ನನಗರ್ಥವಾಗಲಿಲ್ಲ" ಎಂದ.

"ಮಹಾರಾಜ, ಆನೆಯ ಹಾಲು ತುಂಬಾ ಋಚಿಯಾಗಿರುತ್ತದೆ. ಅದರ ತುಪ್ಪಟದಿಂದ ಕಾಶ್ಮೀರ ಶಾಲುಗಳನ್ನು ನೇಯುವರು" ಎಂದು ಗಂಭೀರವಾಗಿ ನುಡಿದ ಬದರಿಪ್ರಸಾದ.

ರಾಜನು ಬೆರಗಾದ. ಸಭಿಕರೆಲ್ಲರೂ ಮುಸಿ ಮುಸಿ ನಕ್ಕರು. ಬದರಿಪ್ರಸಾದನು ಮೂಢ ನೆಂದು ಖಚಿತವಾಯಿತು. ರಾಜನು ಆತನನ್ನು ಉದ್ದೇಶಿಸಿ ಹೀಗೆಂದ: "ಪಂಡಿತೋತ್ತಮನೇ, ನಾನೊಂದು ಆಶ್ಚರ್ಯಕರವಾದ ಸುದ್ದಿ ಕೇಳಿದೆ. ಒಂದಾನೊಂದು ಮೊಲ ಗರ್ಜಿಸುತ್ತ ಸಿಂಹದ ಮೇಲೆ ಹಾರಿತಂತೆ. ಇದು ನಿಜವಿದ್ದೀತೆ?"

"ಅದರಲ್ಲೇನು ಆಶ್ಚರ್ಯ ಮಹಾಪ್ರಭೂ? ಮೊಲಗಳಿಗೆ ಸಿಂಹವೇ ಆಹಾರ. ಮೊಲ ಸಿಂಹದಮೇಲೆ ಹಾರಿ ಅದರ ಕುಂಭಸ್ಥಳವನ್ನು ಸೀಳಿ ತಿನ್ನುವುದೆಂದು ಶಾಸ್ತ್ರಗಳಲ್ಲಿ ಹೇಳಿವೆ" ಎಂದ ಬದರಿಪ್ರಸಾದ. ಈ ಸಾರಿ ಇದನ್ನು ಕೇಳಿ ಸಭಿಕರೆಲ್ಲಾ ಗಟ್ಟಿಯಾಗಿ ಗಹಗಹಿಸಿ ನಕ್ಕರು. ಮಹಾರಾಜನಿಗೂ ನಗು ಬಂದಿತು. "ಹಾಗಾದರೆ ಪಂಡಿತವರ್ಯರೇ, ನಾನೊಂದು ಸಾರಿ ಉರಿಯುತ್ತಿರುವ ಕೆರೆಯನ್ನು ಕಂಡೆ. ಆ ಕೆರೆಯಲ್ಲಿ ಒಂದಾದರೂ ಮೀನು ನನಗೆ ಕಾಣಿಸಲಿಲ್ಲ. ಕಾರಣವೇನಿರ ಬಹುದು?" ಎಂದು ಕೇಳಿದ ರಾಜ.

"ಕೆರೆಯು ಉರಿಯುತ್ತಿದ್ದಿತಲ್ಲವೇ? ಆದುದರಿಂದ ಕೆರೆಯಲ್ಲಿದ್ದ ಮೀನುಗಳೆಲ್ಲಾ ತೀರಕ್ಕೆ ಬಂದು ಸಮೀಪದಲ್ಲಿದ್ದ ಮರಗಳ ಮೇಲೇರಿರಬಹುದು" ಎಂದು ಬದರಿಪ್ರಸಾದ್ ಗಂಭೀರವಾಗಿ ಉತ್ತರಕೊಟ್ಟ.

"ಮಹಾಸ್ವಾಮಿ ತಾವೇ ನೋಡಿದಿರಿ. ಈಗ ಲಾದರೂ ಈ ಮಂದಮತಿಯನ್ನು ಹೊರಕ್ಕೆ ಹಾಕಿ" ಎಂದರು ಇತರ ಪಂಡಿತರು.

ಆಗ ರಾಜನು ನಗುತ್ತಾ "ಇಷ್ಟೊಂದು ಹಾಸ್ಯ ಪ್ರಬೋಧಿಸುವವನನ್ನು ಕಿತ್ತು ಹಾಕು ವುದು ನಮಗೆ ಸಮ್ಮತವಿಲ್ಲ. ಇಂದಿನಿಂದ ಬದರಿ ಪ್ರಸಾದನನ್ನು ನಮ್ಮ ಆಸ್ಥಾನ ವಿದೂಷಕ ನನ್ನಾಗಿ ನಿಯಮಿಸಿದ್ದೇವೆ" ಎಂದನು. ಹೀಗೆ ಆ ಪಂಡಿತಪುತ್ರನ ಭಾಗ್ಯವು ಭದ್ರವಾಯಿತು.





# ಮಂತ್ರಶಕ್ತಿ

ಬ್ರಹ್ಮದತ್ತನು ಕಾಶಿರಾಜ್ಯವನ್ನು ಪಾಲಿಸುತ್ತಿದ್ದ ಕಾಲದಲ್ಲಿ ಒಮ್ಮೆ ಬೋಧಿಸತ್ವನು ಅಸ್ಪೃಶ್ಯನಾಗಿ ಜನ್ಮತಾಳಿದನು. ಆತನು ಒಂದು ಅಪೂರ್ವ ಮಂತ್ರವನ್ನು ಕಲಿತು, ಅಕಾಲದಲ್ಲಿ ಮಾವಿನ ಹಣ್ಣು ಬರಿಸುತ್ತಿದ್ದ.

ದಿನಾ ಮುಂಜಾನೆ ಒಂದು ಕೋಲನ್ನು ಭುಜದಮೇಲೆ ಹಾಕಿಕೊಂಡು, ಅಡವಿಯಲ್ಲಿರುವ ಮಾವಿನ ಮರಗಳ ಹತ್ತಿರ ಹೋಗುವನು. ಏಳು ಅಡಿ ದೂರದಲ್ಲಿ ನಿಂತು ಮಂತ್ರವನ್ನು ಉಚ್ಚರಿಸಿ, ಮಂತ್ರಜಲವನ್ನು ಕೊಂಬೆಗಳಮೇಲೆರಚುವನು. ಆ ಜಲವೆರಚಿದಷ್ಟಗಲದಲ್ಲಿ ಕೊಂಬೆಗಳು ಚಿಗಿತು, ಹೂಬಿಟ್ಟು, ಕಾಯಿಗಳಾಗಿ, ಹಣ್ಣಾಗಿ, ಹಣ್ಣುಗಳು ಜಲಜಲನೆ ಕೆಳಗೆ ಉದುರುತ್ತಿದ್ದವು.

ಈ ವಿಷಯ ಸುನಂದನೆಂಬ ಬ್ರಾಹ್ಮಣ ಯುವಕನಿಗೆ ತಿಳಿಯಿತು. ಆ ಅಸ್ಪೃಶ್ಯನನ್ನು ಆಶ್ರಯಿಸಿ, ಹೇಗಾದರೂ ಈ ಮಂತ್ರವನ್ನು ಕಲಿಯುವ ಅಭಿಲಾಷೆಯುಂಟಾಯಿತು. ಒಂದು ದಿನ ಅಡವಿಯಿಂದ ಬೋಧಿಸತ್ವನು ಮನೆಗೆ ಹಿಂತಿರುಗಿದ ಕೂಡಲೇ ಸುನಂದನು ಆತನ ಕೋಲು ಮತ್ತು ಮೂಟೆಗಳನ್ನು ತೆಗೆದುಕೊಂಡು, ಮನೆಯೊಳಗೆ ಇಟ್ಟನು. ಅಂದಿನಿಂದ ಅವನು ತುಂಬಾ ಶ್ರದ್ಧಾ ಭಕ್ತಿಗಳಿಂದ ಬೋಧಿಸತ್ವನ ಮನೆಯ ಕೆಲಸ ಕಾರ್ಯಗಳನ್ನು ಮಾಡ ತೊಡಗಿದನು.

ಒಂದು ದಿನ ಬೋಧಿಸತ್ವನು ತನ್ನ ಹೆಂಡತಿಯೊಂದಿಗೆ "ಈ ಹುಡುಗನು ಏಕೆ ನಮ್ಮನ್ನು ಆಶ್ರಯಿಸಿದ್ದಾನೆಂದು ನಿನಗೆ ತಿಳಿದಿದೆಯೇ? ಮಾವಿನ ಹಣ್ಣುಗಳನ್ನು ಸೃಷ್ಟಿಸುವ ಮಂತ್ರವನ್ನು ಕಲಿತುಕೊಳ್ಳಬೇಕೆಂದು ಅವನ ಬಯಕೆ. ಆದರೆ ಅವನ ಬುದ್ಧಿ ಒಳ್ಳೆಯದಲ್ಲ. ಈ ಮಂತ್ರ ಕಲಿತರೂ ಅದರಿಂದ ಅವನಿಗೆ ಉಪಯೋಗವಾಗಲಾರದು" ಎಂದ.

ಸುನಂದನು ಮನೆಯಲ್ಲಿ ಅತಿ ವಿಧೇಯನಾಗಿ, ಶ್ರದ್ಧೆಯಿಂದ ಕೆಲಸಮಾಡುತ್ತಿದ್ದನಾದುದರಿಂದ ಮನೆಯಾಕೆಯ ಮನ ಕರಗಿತು. ಒಂದು ದಿನ ಆಕೆ ತನ್ನ ಗಂಡನೊಂದಿಗೆ "ಈ ಹುಡುಗ ನಮ್ಮ ಮನೆ ಚಾಕರಿಯ

ಯಚ್. ನಾರಾಯಣರಾವ್



ನ್ನೆಲ್ಲಾ ಮಾಡುತ್ತಾ, ಹೆತ್ತಮಗನಿಗಿಂತಲೂ ಹೆಚ್ಚು ಸಹಕಾರಿಯಾಗಿದ್ದಾನೆ. ಮಂತ್ರ ಲಭಿಸಿದರೆ ಲಭಿಸಿತು, ಇಲ್ಲದಿದ್ದರೆ ಇಲ್ಲ. ಅವನಿಗೆ ಆ ಮಂತ್ರ ನೀವು ಉಪದೇಶಮಾಡಲೇಬೇಕು. ಎಂದು ಶಿಫಾರಸು ಮಾಡಲು, ಬೋಧಿಸತ್ವನು ಆಗಲೆಂದು ಒಪ್ಪಿಕೊಂಡನು.

ಒಂದು ದಿನ ಬೋಧಿಸತ್ವನು ಸುನಂದನನ್ನು ಕರೆದು "ಎಲೆ ತಮ್ಮಾ, ಇದೊಂದು ಅಪೂರ್ವವಾದ ಮಂತ್ರ. ಇದರಿಂದ ನಿನಗೆ ಬೇಕಾದಷ್ಟು ಹಣ, ಕೀರ್ತಿಗಳು ಲಭಿಸುವುವು. ಆದರೆ ನಿನಗೆ ಈ ಮಂತ್ರವನ್ನು ಕಲಿಸಿದ ಗುರುಗಳು ಯಾರೆಂಬ ವಿಷಯವನ್ನು ಮಾತ್ರ ರಹಸ್ಯವಾಗಿಡಬೇಕು. ಅದಕ್ಕೆ ತಪ್ಪಿದರೆ ಈ ಮಂತ್ರ ಮರೆತುಹೋಗುತ್ತದೆ" ಎಂದು ಹೇಳಿ, ಆ ಮಂತ್ರವನ್ನು ಉಪದೇಶಮಾಡಿದನು.

ಸುನಂದನು ತನ್ನ ಮನೆ ಸೇರಿಕೊಂಡ. ಅಕಾಲದಲ್ಲಿ ಮಾವಿನ ಹಣ್ಣು ಸೃಷ್ಟಿಸಿ, ಅವುಗಳನ್ನು ವಿಕ್ರಯಿಸಿ ಹಣಗಾರನಾಗುತ್ತಿದ್ದನು.

ಸುನಂದನ ಮಾವಿನ ಹಣ್ಣುಗಳಲ್ಲಿ ಒಂದು ಹೇಗೋ ಕಾಶಿರಾಜನ ಕೈ ಸೇರಿತು. ರಾಜನು ಆಶ್ಚರ್ಯಗೊಂಡು, ಆ ಹುಡುಗನನ್ನು ಅರಮನೆಗೆ ಬರಮಾಡಿ "ಎಲೈ ತರುಣನೇ, ಋತುವಲ್ಲದ ಋತುವಿನಲ್ಲಿ ಇಂಥ ಪರಿಮಳವುಳ್ಳ, ಪಸಂದಾದ ಮಾವಿನಹಣ್ಣುಗಳು ನಿನಗೆಲ್ಲಿ ದೊರೆತವು? ಇವು ದೈವ ಸೃಷ್ಟಿಯೋ, ಮಾನವ ಸೃಷ್ಟಿಯೋ? ನಿಜ ಹೇಳು" ಎಂದು ಕೇಳಿದ. ಅದಕ್ಕೆ ಸುನಂದನು "ಮಹಾರಾಜ,



ನನಗೊಂದು ಅಪೂರ್ವ ಮಂತ್ರ ಸಿದ್ಧಿಸಿದೆ. ಅದರ ಪ್ರಭಾವದಿಂದ ನಾನೇ ಇವುಗಳನ್ನು ಸೃಷ್ಟಿಸುವೆನು," ಎಂದು ಉತ್ತರ ಹೇಳಿದ. ಹಾಗೇ ಮಾತಿನ ಸಂದರ್ಭದಲ್ಲಿ ಆ ಮಂತ್ರದ ಮಹಿಮೆ ನೋಡಲು ತುಂಬಾ ಕೌತುಕವಾಗಿರುವುದೆಂತಲೂ, ಪ್ರತ್ಯಕ್ಷವಾಗಿ ಹಣ್ಣುಗಳನ್ನು ಸೃಷ್ಟಿಸಿ ತೋರಿಸುವುದಾಗಿಯೂ ಹೇಳಿದ ಸುನಂದ.

ಮಾರನೇಯ ದಿನ ರಾಜನು ಸುನಂದನನ್ನೂ, ತನ್ನ ಪರಿವಾರವನ್ನೂ ಸಂಗಡ ಕರೆದುಕೊಂಡು ತೋಪಿಗೆ ಹೋದನು. ಸುನಂದನು ಮಂತ್ರ ಜಲವನ್ನು ಕೊಂಬೆಗಳ ಮೇಲೆ ಎರಚಿದ ತಕ್ಷಣ ನೂರಾರು ಹಣ್ಣುಗಳು ಕೆಳಗೆ ಉದುರಿದವು. ಈ ಪವಾಡವನ್ನು

ಕಂಡು ರಾಜನೂ, ಆತನ ಪರಿವಾರವೂ ಆಶ್ಚರ್ಯಭರಿತರಾದರು. ಎಲ್ಲರೂ ಹಣ್ಣುಗಳನ್ನು ಆರಿಸಿಕೊಂಡು ಭುಜಿಸಿದರು. ರಾಜನು ಸುನಂದನನ್ನು ಮೆಚ್ಚಿಕೊಂಡು ಆತನಿಗೆ ಅನೇಕ ಬಹುಮಾನಗಳನ್ನು ಕೊಟ್ಟನು.

ಆತರುವಾಯ ರಾಜನು "ಇಂತಹ ಮಂತ್ರವನ್ನು ಉಪದೇಶ ಮಾಡಿದ ಮಹಾತ್ಮನು ಯಾರು?" ಎಂದು ಕೇಳಿದನು.

ರಹಸ್ಯವನ್ನು ಬಯಲುಮಾಡಿದರೆ ಮಂತ್ರದ ಪ್ರಭಾವವು ಮುಕ್ತಾಯವಾಗುವುದೆಂದು ಹೇಳಿದ ತನ್ನ ಗುರುಗಳ ಮಾತು ಸುನಂದನ ಜ್ಞಾಪಕಕ್ಕೆ ಬಂತು. ಆದರೆ ಕಂಠತಃ ಬಂದ ಮಂತ್ರಶಕ್ತಿ ಮರೆಯುವುದೆಂದರೇನು? ಅಸಂಬದ್ಧ ಎಂದು ಯೋಚಿಸಿ ನಿಜವಿಷಯವನ್ನು ತಿಳಿಸಿದನು.

ಅದಕ್ಕೆ ರಾಜನು "ಏನು? ಇಂತಹ ದಿವ್ಯಮಂತ್ರವನ್ನು ನೀನು ಒಬ್ಬ ಅಸ್ಪೃಶ್ಯನ ಹತ್ತಿರ ಕಲಿತುಕೊಂಡೆಯಾ? ಇಹಲೋಕ ಸೌಖ್ಯಕ್ಕಾಗಿ ನೀನು ಸ್ವಧರ್ಮವನ್ನು ಮರೆತೆ. ಇದು ತುಂಬಾ ನೀಚವಾದ ಕೆಲಸ" ಎಂದು ಪರಿಹಾಸಮಾಡಿದನು. ರಾಜನು ಹೀಗೆ ಹೇಳಲು ಸುನಂದನು ನಾಚಿಕೆಯಿಂದ ತಲೆ ತಗ್ಗಿಸಿ, ಮನೆಯಹಾದಿ ಹಿಡಿದನು.

ಕೆಲವುಕಾಲ ಕಳೆಯಿತು. ಇದ್ದಕ್ಕಿದ್ದಂತೆಯೇ ಒಂದುದಿನ ರಾಜನಿಗೆ ಮಾವಿನಹಣ್ಣು ತಿನ್ನಬೇಕೆಂದು ಆಶೆ ಆಯಿತು. ಸುನಂದನಿಗೆ ಹೇಳಿ ಕಳುಹಿಸಿದನು. ಆತನು ಬಂದ ಕೂಡಲೇ ರಾಜನು ತನ್ನ ಬಯಕೆಯನ್ನು ತಿಳಿಸಿದನು.

ಎಲ್ಲರೂ ತೋಪಿಗೆ ಹೋದರು.

ಸುನಂದನು ಎಂದಿನಂತೆ ಮರದಿಂದ ಏಳು ಅಡಿ ದೂರದಲ್ಲಿ ನಿಂತು ಮಂತ್ರವನ್ನು ಪಠಿಸಲು ಸಿದ್ಧನಾದನು. ಆದರೆ ಆತನಿಗೆ ಆ ಮಂತ್ರ ಏನು ಮಾಡಿದರೂ ಜ್ಞಾಪಕಕ್ಕೆ ಬರಲೊಲ್ಲದು. ಗುರುವಿನ ಮಾತು ಮೀರಿದುದರಿಂದ ಮಂತ್ರ ಜ್ಞಾಪಕಕ್ಕೆ ಬರಲಿಲ್ಲವೆಂದು ಆಗ ಆತನು ಅರಿತುಕೊಂಡನು.

ಸುನಂದನು ರಾಜನೊಂದಿಗೆ ತಾನು ಗುರುಗಳಾಜ್ಞೆಯನ್ನು ಉಲ್ಲಂಘಿಸಿದೆನಾದುದರಿಂದ ಮಂತ್ರಶಕ್ತಿ ಹೋಯಿತೆಂದು ಹೇಳಿ, ತಲೆ ತಗ್ಗಿಸಿಕೊಂಡು ಮನೆಯ ಕಡೆ ನಡೆದನು.





# ಅಂಜುಕುಳಿ

ಬಹಳಕಾಲದ ಹಿಂದೆ ಪರ್ಷಿಯಾದೇಶದಲ್ಲಿ ಒಬ್ಬ ಯುವರಾಜನಿದ್ದನು. ಆತನು ಸಕಲ ವಿದ್ಯೆಗಳಲ್ಲಿ ಪಾರಂಗತನಾಗಿದ್ದರೂ ಚಂದಮಾಮನಿಗೆ ಕಳಂಕವಿದ್ದಂತೆ ಆತನಲ್ಲಿ ಪುಕ್ಕಲುತನವಿತ್ತು. ಯುವರಾಜನಿಗೆ ಇಪ್ಪತ್ತು ವರ್ಷ ತುಂಬುವವೇಳೆಗೆ ಆತನ ತಂದೆ ಮರಣಿಸಿದನು. ಯುವರಾಜನಿಗೆ ಪಟ್ಟಾಭಿಷೇಕ ಮಾಡಲು ಎಲ್ಲ ಸಿದ್ಧತೆಗಳೂ ಸಾಗುತ್ತಿದ್ದವು.

ಆ ದೇಶದಲ್ಲಿ ಒಂದು ಪದ್ಧತಿಯಿತ್ತು. ಅದೇನೆಂದರೆ ಸಿಂಹಾಸನವೇರುವ ಮೊದಲು ಆತನು ಸಿಂಹದೊಂದಿಗೆ ಹೋರಾಡಬೇಕು. ಯುವರಾಜನಿಗಾಗಿ ಒಂದು ಸಿಂಹವನ್ನು ಬೋನಿನಲ್ಲಿ ಸಿದ್ಧಪಡಿಸಿದ್ದರು. ಸಿಂಹವನ್ನು ಕುರಿತು ಆಲೋಚಿಸಿದ ಮಾತ್ರಕ್ಕೇ ಅಂಜುಕುಳಿಯಾದ ಯುವರಾಜನ ಕೈಕಾಲುಗಳು ಭೀತಿಯಿಂದ ಕಂಪಿಸುವುವು. ಆತನು ಪಟ್ಟಾಭಿಷೇಕದ ಹಿಂದಿನದಿನ ರಾತ್ರಿ ಯಾರಿಗೂ ತಿಳಿಯದಂತೆ ತನ್ನ ಕುದುರೆಯನ್ನೇರಿ ಏಕಾಯೇಕಿ ಆ ದೇಶವನ್ನು ತ್ಯಜಿಸಿದನು.

ಯುವರಾಜನು ಮೂರುದಿನ ಪ್ರಯಾಣ ಮಾಡಿ, ಬೇರೊಂದು ರಾಜ್ಯವನ್ನು ಸೇರಿಕೊಂಡನು. ಆ ದೇಶವು ತುಂಬಾ ಮನಮೋಹಕವಾಗಿತ್ತು. ಒಂದು ಕಡೆ ಮೇಯುತ್ತಿದ್ದ ಕುರಿಗಳ ಮಂದೆ ಕಾಣಿಸಿತು. ಸಮೀಪದಲ್ಲೇ ಕುರುಬರ ಹುಡುಗನೊಬ್ಬನು ಬಂಡೆಯ ಮೇಲೆ ಕುಳಿತುಕೊಂಡು ನಿಶ್ಚಿಂತೆಯಿಂದ ಇಂಪಾಗಿ ಕೊಳಲನ್ನು ನುಡಿಸುತ್ತಿದ್ದನು.

ಯುವರಾಜನು ಆ ಹುಡುಗನನ್ನು ಮಾತನಾಡಿಸಿದ. ಆ ಹುಡುಗ ಯುವರಾಜನನ್ನು ತನ್ನ ಒಡೆಯನ ಮನೆಗೆ ಕರೆದುಕೊಂಡು ಹೋದ. ಅವನ ಯಜಮಾನನು ಆ ಊರಲ್ಲಿ ಒಬ್ಬ ಗಣ್ಯರೈತ. ಆತನು ಯುವರಾಜನಿಗೆ ಭರ್ಜರಿ ಊಟವನ್ನಿಟ್ಟು "ತಾವು ಯಾರು? ಯಾವ ಸ್ಥಳ? ಎತ್ತಕಡೆ ಹೋಗುವಿರಿ?" ಎಂದು ಪ್ರಶ್ನೆಮಾಡಿದ.

"ಅಯ್ಯಾ, ನಾನೊಂದು ದೇಶದ ಯುವರಾಜ. ನನ್ನ ಹೆಸರು ಹೇಳಲಾರೆ. ಪರಿಸ್ಥಿತಿಗಳು ಪ್ರತಿಕೂಲವಾಗಿದ್ದುದರಿಂದ ನಾನು

ಬಿ. ಪದ್ಮಾಗೋಪಾಲಕುಲಕರಣಿ



ದೇಶಭ್ರಷ್ಟನಾದೆ. ಸದ್ಯದಲ್ಲಿ ನನಗೊಂದು ಸ್ಥಳವೆಂಬುದಿಲ್ಲ" ಎಂದ ಯುವರಾಜ.

"ಹಾಗಿದ್ದ ಪಕ್ಷಕ್ಕೆ ತಾವು ನಮ್ಮ ಮನೆಯಲ್ಲೇ ಇರಿ. ತಮಗೆ ಯಾವ ಕೊರತೆಯೂ ಉಂಟಾಗದಂತೆ ನೋಡಿಕೊಳ್ಳುವೆವು. ಮುಂದೆ ತಮಗೆ ಸುದಿನಗಳು ಬಾರದೆ ಇರಲಾರವು" ಎಂದ ಆ ರೈತ.

ಯುವರಾಜನು ರೈತನ ಆತಿಥ್ಯವನ್ನು ಸ್ವೀಕರಿಸಿದ. ಆತನು ಪ್ರತಿದಿನಾ ಕುರಿಕಾಯುವ ಹುಡುಗನೊಂದಿಗೆ ಅಡವಿಯ ಕಡೆಗೋ, ಇಲ್ಲ ಜಲಪಾತದ ಕಡೆಗೋ ಹೋಗುತ್ತಿದ್ದ. ಹುಡುಗನ ಹಾಡು ಕೇಳುತ್ತಾ ಕಾಲನೂಕುತ್ತಿದ್ದನು. ಕೆಲವು ದಿನಗಳಮೇಲೆ ಒಂದುದಿನ ಯುವರಾಜನು ಕುರುಬನ ಸಂಗಡ ಒಂದು ಬೆಟ್ಟದ ಕೊನೆಗೆ ಹೋದ. ಅಲ್ಲಿಗೆ ಇನ್ನೂ ಅನೇಕ ಜನ ಕುರಿಕಾಯುವವರು ತಮ್ಮ ತಮ್ಮ ಕುರಿಗಳನ್ನು ಅಟ್ಟಿಕೊಂಡು ಬಂದರು. ಆ ಪ್ರದೇಶ ತುಂಬಾ ಉಲ್ಲಾಸಕಾರಿಯಾಗಿತ್ತು. ಅಲ್ಲೊಂದು ಇಲ್ಲೊಂದು ಕುರಿಗಳಮುಂದೆ ಮೇಯುತ್ತಿದ್ದವು. ಹುಡುಗರು ವಿನೋದವಾಗಿ ಹಾಡಿಕೊಳ್ಳುತ್ತಿದ್ದರು. ಈ ಸಮಯದಲ್ಲಿ "ಸಿಂಹ, ಸಿಂಹ" ಎಂಬ ಕೂಗು ಕೇಳಿಸಿತು.

ಈ ಹುಡುಗರೆಲ್ಲಾ ಕೈಗೆ ಸಿಕ್ಕಿದ ಕಲ್ಲು, ಕೋಲುಗಳನ್ನು ಹಿಡಿದು ಕೂಗು ಕೇಳಿಬಂದ ಸ್ಥಳದ ಕಡೆ ಓಡಿದರು. "ಬನ್ನಿ, ಸಿಂಹವನ್ನು ಸಾಯಿಸುವ" ಎಂದ ಯುವರಾಜನೊಂದಿಗೆ ಇದ್ದ ಬಾಲಕ. ಆದರೆ ಯುವರಾಜನು ನಿಶ್ಚೇಷ್ಟಿತನಾಗಿದ್ದ. ಬಾಲಕನು ಕ್ಷಣಹೊತ್ತು ಆತನಿಗಾಗಿ ಕಾದು, ನಂತರ ಸಿಂಹವನ್ನು ಬೇಟೆಯಾಡಲು ಓಡಿದ.

ಚೇತರಿಸಿಕೊಂಡ ನಂತರ ಯುವರಾಜನು ಒಂದು ಮರವನ್ನೇರಿ, ಒತ್ತಾಗಿ ಬೆಳೆದಿರುವ ಎಲೆಗಳ ನಡುವೆ ಅವಿತಿಟ್ಟುಕೊಂಡ. ಸ್ವಲ್ಪ ಹೊತ್ತಿಗೆಲ್ಲಾ ಕುರಿಕಾಯುವ ಬಾಲಕರು ಸಂತೋಷದಿಂದ ಕೇಕೇ ಹಾಕುತ್ತಾ ಹಿಂತಿರುಗಿದರು. ತಾವು ಕೊಂದ ಸಿಂಹ ಅವರೊಂದಿಗಿತ್ತು.

ಕುರಿಕಾಯುವ ಹುಡುಗನಿಗಿದ್ದ ಧೈರ್ಯ ತನಗಿಲ್ಲವಾಯಿತು. ಸತ್ತು ಬಿದ್ದಿರುವ ಸಿಂಹವನ್ನು ಕಂಡರೂ ಹೆದರಿಕೆ. ಕುರಿಕಾಯುವವರು

ಮನೆಗಳಿಗೆ ಹಿಂತಿರುಗಿದರು. ಯುವರಾಜನು ಮರದಿಂದ ಇಳಿದು, ರೈತನಿಗೆ ಮುಖತೋರಿಸಲು ನಾಚಿಕೆಯಾಗಿ, ಯಾರಿಗೂ ಕಾಣದಂತೆ ಮುಂದಕ್ಕೆ ಪ್ರಯಾಣಬೆಳೆಸಿದ.

ಮತ್ತೆ ಮೂರುದಿನ ಪ್ರಯಾಣಮಾಡಿ ಒಂದು ಮರುಭೂಮಿಯನ್ನು ಸೇರಿಕೊಂಡ. ಅಲ್ಲಿ ಆತನಿಗೊಂದು ಸೈನಿಕರ ಶಿಬಿರಗಳು ಕಾಣಬಂದವು. ಆ ಶಿಬಿರದ ನಾಯಕನಾದ ಸೇನಾಧಿಪತಿ ಯುವರಾಜನಿಗೆ ಅನ್ನಪಾನೀಯಗಳನ್ನುಕೊಟ್ಟು ಆದರಿಸಿದನು. ಆತನೊಂದಿಗೂ ಯುವರಾಜನು ತನ್ನ ಹೆಸರನ್ನು ಹೇಳಲಿಲ್ಲ. ತಾನು ದೇಶಭ್ರಷ್ಟನಾದ ಒಬ್ಬಾನೊಬ್ಬ ಯುವರಾಜನೆಂದು ಹೇಳಿದ. ಅವನ ಕಥೆ ಕೇಳಿ "ತಾವು ನಮ್ಮ ಶಿಬಿರದಲ್ಲಿ ಒಬ್ಬ ಸೈನಿಕನಂತೆ ಇರಿ. ಯಾವೊಂದು ಲೋಪವೂ ಉಂಟಾಗದಂತೆ ನೋಡಿಕೊಳ್ಳುವೆವು. ಒಳ್ಳೆಯಕಾಲ ಎಂದಿಗಾದರೂ ಬಂದೇ ಬರುತ್ತದೆ" ಎಂದ ಸೇನಾಧಿಪತಿ. ಯುವರಾಜನು ಅವರೊಂದಿಗೆ ಇರಲು ಸಮ್ಮತಿಸಿದನು.

ಆತನಿಗೆ ಅಲ್ಲಿಯ ಜೀವನ ಸೊಗಸಾಗಿ ತೋರಿತು. ಒಂದು ದಿನ ಸೈನಿಕರೆಲ್ಲರೂ ಕುದುರೆಗಳಮೇಲೇರಿ ಎಲ್ಲಿಗೋ ಹೊರಟರು. "ಬನ್ನಿ" ಎಂದು ಯುವರಾಜನನ್ನು ಕರೆದರು. "ಎಲ್ಲಿಗೆ ಹೊರಟಿರುವಿರಿ?" ಎಂದ ಯುವರಾಜ.

"ಸಮೀಪದಲ್ಲಿರುವ ಬೆಟ್ಟಗಳಲ್ಲಿ ಸಿಂಹಗಳಿರುವುವು. ಅವುಗಳನ್ನು ಬೇಟೆಯಾಡಲು ತೆರಳುತ್ತಿರುವೆವು. ಬಹಳ ದಿನಗಳಿಂದ ಸಮರವಿಲ್ಲದಕಾರಣ ನಮ್ಮ ಧೈರ್ಯಸಾಹಸಗಳು





ಉಡುಗಿ ಹೋಗುತ್ತಿವೆ, ಶರೀರ ಬಡವಾಗುತ್ತಿದೆ. ಲವಲವಿಕೆ, ಚೈತನ್ಯಗಳನ್ನು ಪಡೆಯುಲು ಆಗಾಗ ಬೇಟೆಯಾಡುತ್ತಿರುತ್ತೇವೆ," ಎಂದು ಹೇಳಿದರು ಸೈನಿಕರು.

ಯುವರಾಜನು ಅವರೊಂದಿಗೆ ಹೋಗದೆ ಬೇರೆ ಮಾರ್ಗವಿರಲಿಲ್ಲ. ಸಿಂಹಗಳ ಕಾಲು ಕೆದಕಿ ಬೇಟೆಯಾಡುವ ಸೈನಿಕರು ಅವನಿಗೆ ಅತಿ ಪರಾಕ್ರಮಿಗಳಂತೆ ಕಂಡು ಬಂದರು. ಸೈನಿಕರು ಬೆಟ್ಟಗಳ ಮಧ್ಯೆ ಪ್ರವೇಶಿಸಿದ ಕೂಡಲೇ ಯುವರಾಜನು ತನ್ನ ಕುದುರೆಯನ್ನು ಬೇರೊಂದು ಮಾರ್ಗವಾಗಿ ನಡೆಯಿಸಿದ.

ಮತ್ತೆ ಕೆಲವು ದಿನ ಪ್ರಯಾಣಮಾಡಿ ಒಂದು ಮಹಾನಗರವನ್ನು ಪ್ರವೇಶಿಸಿದ. ಆತನು ದೇಶ ಭ್ರಷ್ಟನಾದ ಯುವರಾಜನೆಂದು ವಿಚಾರದಿಂದ ತಿಳಿದು, ಆ ದೇಶದ ರಾಜನು ಆತನನ್ನು ಆಹ್ವಾನಿಸಿ, ರಾಜರಿಗೆ ಸಲ್ಲುವ ಮರ್ಯಾದೆಗಳನ್ನು ಮಾಡಿದ. ಅನುಕೂಲವಾದ ಪರಿಸ್ಥಿತಿ ಯೊದಗುವವರೆವಿಗೂ ತನ್ನ ಅತಿಥಿಯಾಗಿರಬೇಕೆಂದು ಕೋರಿದ.

ಆ ರಾಜನಿಗೆ ಒಬ್ಬ ಮಗಳಿದ್ದಳು. ತುಂಬಾ ಜಾಣೆ. ಯುವರಾಜನಿಗೆ ಯಾವ ಚಿಂತೆಯೂ ಉಂಟಾಗದಂತೆ ಆಕೆ ಆತನೊಂದಿಗಿದ್ದು ಮಾತು ಕಥೆಯಾಡುತ್ತಿದ್ದಳು.

ಅಂದು ಸಾಯಂಕಾಲ ಭೋಜನವಾದ ನಂತರ ಇಬ್ಬರೂ ಮಾತನಾಡುತ್ತಾ ಕುಳಿತಿದ್ದರು. ಆಗ ಅನಿರೀಕ್ಷಿತವಾಗಿ ಅವರಿದ್ದ ಕೋಣೆಯ ಹೊರಗೆ ಭಯಂಕರವಾದ ಶಬ್ದ ಕೇಳಿಸಿತು. ಯುವರಾಜನು ಕಂಪಿತಸ್ವರದಲ್ಲಿ "ಏನದು ಶಬ್ದ ?" ಎಂದು ಕೇಳಿದ.

"ಮತ್ತೇನಿಲ್ಲ. ನನ್ನ ಕರಿಭಂಟನು ಆಕಳಿಸುತ್ತಿದ್ದಾನೆ" ಎಂದು ಸಮಾಧಾನವಿತ್ತಳು ರಾಜಕುಮಾರಿ. ಕರಿಭಂಟನೆಂದರೆ ನಿಗ್ರೋ ನೌಕರನಿರಬಹುದೆಂದು ಊಹಿಸಿದ ಯುವರಾಜ. ಕೇವಲ ಒಬ್ಬಸೇವಕನು ಆರೀತಿ ಆಕಳಿಸಿದರೂ ರಾಜಕುಮಾರಿ ಆಗ್ರಹಗೊಳ್ಳದಿರುವುದನ್ನು ಕಂಡು ಆತನು ವಿಸ್ಮಯಹೊಂದಿದನು.

ಮತ್ತೆ ಸ್ವಲ್ಪ ಹೊತ್ತಾದನಂತರ "ಹೊತ್ತು ಬಹಳವಾಯಿತು. ಹೋಗಿ ಮಲಗಿಕೊಳ್ಳಿ" ಎಂದು ರಾಜಕುಮಾರಿ ಎದ್ದು ಹೋಗಿ ಬಾಗಿಲು ತೆರೆದಳು. ಮರುಕ್ಷಣವೇ ಯುವರಾಜನ ಎದೆ ದಸಕ್ ಎಂದಿತು. ಸಿಂಹ!

ಬಾಗಿಲಮುಂದೆ ಬಂದು ಭಾರಿ ಕರಿಯ ಸಿಂಹ ಕುಳಿತಿದೆ! "ಸಿಂಹ, ಸಿಂಹ" ಎಂದು ಕಿರಾರನೆ ಕಿರಿಚಿದ ಯುವರಾಜ. "ಭಯ ಪಡಬೇಡಿ. ಭಯಪಟ್ಟರೆ ಕಾಡು ಮೃಗಗಳು ಮೇಲೆ ಬೀಳುವುವೆಂದು ನಿಮಗೆ ಗೊತ್ತಿಲ್ಲವೇ? ಇದು ನನ್ನ ಸಾಕುಸಿಂಹ. ಅಪಾಯವೇನೂ ಮಾಡುವುದಿಲ್ಲ. ಸದಾ ನನ್ನೊಂದಿಗೆ ಓಡಾಡಿ ಕೊಂಡಿರುತ್ತದೆ" ಎಂದು ಹೇಳುತ್ತ ರಾಜ ಕುಮಾರಿ ಆ ಕರಿಯ ಕೇಸರಿಯ ತಲೆಯನ್ನು ನೇವರಿಸಿದಳು.

ಯುವರಾಜನು ಸ್ವಲ್ಪ ಚೇತರಿಸಿಕೊಂಡನು. ಅವನ ಮನಸ್ಸಿನಲ್ಲಿ ಯೋಚನೆ ತೊಡಗಿತು. ತರುವಾಯ ರಾಜಕುಮಾರಿ ಕರಿಯ ಸಿಂಹ ವನ್ನು ತನ್ನ ಸಂಗಡ ಕರೆದುಕೊಂಡು ಅಂತಃಪುರಕ್ಕೆ ಹೊರಟುಹೋದಳು. ಆ ರಾತ್ರಿ ಯುವರಾಜನಿಗೆ ನಿದ್ದೆ ಬರಲಿಲ್ಲ. ತಾನು ಬಾಧೆ ಪಡುತ್ತಿರುವುದು ಬರೀ ಭಯದಿಂದಲೇ ಎಂದು ಆತನು ತಿಳಿದುಕೊಂಡ. ಕುರಿಕಾಯುವ ಹುಡುಗರು ಸಿಂಹವನ್ನು ಕೊಂದರು; ಸೈನಿಕರು ಸಿಂಹದ ಬೇಟೆಗೆ ಹಾತೊರೆಯು ವರು; ರಾಜಕುಮಾರಿ ಸಿಂಹವನ್ನು ಸ್ವತಃ ಸಾಕುತ್ತಿರುವಳು. ಅವರಿಗೆ ಬಾಧೆಯಿಲ್ಲ, ಭಯವಿಲ್ಲ. ಆದರೆ ತನಗಿದೆ. ಅವರೆಲ್ಲರಿಗೂ ತನಗೂ ಅಷ್ಟೇ ವ್ಯತ್ಯಾಸ. ಭಯವಿಲ್ಲದವನನ್ನು ಸಿಂಹವೇ ಅಲ್ಲ, ಯಾರೂ ಏನೂ ಮಾಡ ಲಾರರು. ಧೈರ್ಯವೇ ಜಯದ ಸಾಧನ!

ಹೀಗೆಂದು ಖಚಿತಮಾಡಿಕೊಂಡ ಯುವ ರಾಜನು ಯಾರಿಗೂ ತಿಳಿಸದೆ ಬೆಳಗಾಗುವ



ಮೊದಲೇ ತನ್ನ ಕುದುರೆಯನ್ನೇರಿ, ಸ್ವದೇಶಕ್ಕೆ ಹೊರಟ. ಯುವರಾಜನ ಸುಳಿವು ತಿಳಿಯದೆ ಕಳವಳಪಡುತ್ತಿದ್ದ ಬಂಧು ಮಿತ್ರರು ಆತನನ್ನು ಕಂಡು ಸಂತಸಗೊಂಡರು. ಪ್ರಜೆಗಳೂ ಉತ್ಸಾಹದಿಂದ ಘೋಷಣೆಮಾಡಿದರು.

"ನಾನು ಸಿಂಹದೊಂದಿಗೆ ಹೋರಾಡುತ್ತೇನೆ. ಎಲ್ಲ ಸಿದ್ಧತೆಗಳನ್ನು ಮಾಡಿ" ಎಂದ ಯುವರಾಜ. ಮಾರನೇಯ ದಿನವೇ ಯುವರಾಜನು ಸಿಂಹದೊಂದಿಗೆ ಕಾಳಗಮಾಡಲು ಎಲ್ಲ ಏರ್ಪಾಟುಗಳಾದವು. ಯುವರಾಜನು ಗುರಾಣಿಯನ್ನು ಹಿಡಿದುಕೊಂಡು ರಂಗಸ್ಥಳದ ಮೇಲೆ ಬಂದು ಧೈರ್ಯವಾಗಿ ನಿಂತುಕೊಂಡ. ಅಲ್ಲಿಗೆ ಸಿಂಹವಿದ್ದ ಬೋನನ್ನು ತಂದು ಅದನ್ನು ಹೊರಗೆ ಬಿಟ್ಟರು.

ಬೋನಿನ ಬಾಗಿಲು ತೆರೆದ ಕೊಡಲೇ ಸಿಂಹವು ಭೀಕರವಾಗಿ ಗರ್ಜಿಸುತ್ತಾ ಹೊರಗೆ ಬಂದಿತು. ಯುವರಾಜನು ಮಿಸುಕಾಡಲಿಲ್ಲ. ಸಿಂಹವು ಆತನ ಸುತ್ತಲೂ ಎರಡು ಮೂರು ಸಾರಿ ಸುತ್ತಿ ಆತನ ಪಕ್ಕದಲ್ಲೇ ಕುಳಿತು, ಆತನ ಕೈ ನೆಕ್ಕಿತು. ಅದು ಸಾಕುಸಿಂಹ.

ಆ ವಿಷಯವನ್ನು ಸಚಿವರು ಬೇಕೆಂತಲೇ ಯುವರಾಜನಿಂದ ಮರೆಮಾಚಿದ್ದರು. ಯುವರಾಜನ ಧೈರ್ಯಸಾಹಸಗಳು ವ್ಯಕ್ತವಾದವು.

ಪಟ್ಟಾಭಿಷೇಕಕ್ಕೆ ಬರಬೇಕೆಂದು ಎಲ್ಲರಿಗೂ ಆಹ್ವಾನಗಳನ್ನು ಕಳುಹಿಸಲಾಯಿತು. ರೈತನಿಗೂ, ಕುರಿಕಾಯುವ ಹುಡುಗನಿಗೂ, ಮರುಭೂಮಿಯಲ್ಲಿದ್ದ ಸೇನಾಧಿಪತಿ ಮತ್ತು ಸೈನಿಕರಿಗೂ, ರಾಜ ಮತ್ತು ರಾಜಕುಮಾರಿಗೂ ವಿಶೇಷ ಆಹ್ವಾನ ಪತ್ರಿಕೆಗಳನ್ನು ಕಳುಹಿಸಲಾಯಿತು. ಅವರೆಲ್ಲರೂ ಪಟ್ಟಾಭಿಷೇಕ ಮಹೋತ್ಸವಕ್ಕೆ ಬಂದರು.

ಪಟ್ಟಾಭಿಷಿಕ್ತನಾದ ರಾಜನಿಗೆ ಎಲ್ಲರೂ ಕಾಣಿಕೆಗಳನ್ನು ಸಮರ್ಪಿಸುತ್ತಿರುವಾಗ ಮೇಲೆ ಹೇಳಿದ ರಾಜನು "ಮಹಾರಾಜ, ನಾನು ಬೇರೆ ಯಾವ ಕಾಣಿಕೆಯನ್ನೂ ತರಲಿಲ್ಲ. ನನ್ನ ಮಗಳನ್ನು ಕರೆತಂದಿರುವೆನು. ಆಕೆಯನ್ನು ಸ್ವೀಕರಿಸಬೇಕು" ಎಂದನು.

ಯುವರಾಜನು ರಾಜಕುಮಾರಿಯನ್ನು ವಿವಾಹವಾಗಿ, ವೀರನೆನಿಸಿ ಬಹುಕಾಲ ಸುಖವಾಗಿ ಬಾಳಿದನು.





# ಸಮಯಸ್ಫೂರ್ತಿ

**ಪೂ**ರ್ವಕಾಲದಲ್ಲಿ ವಿಂಧ್ಯಪರ್ವತದ ಬಳಿಯಲ್ಲಿದ್ದ ದಂಡಕಾರಣ್ಯದಲ್ಲಿ ಹುಲಿಗಳ ಕಾಟ ಬಹಳವಾಗಿತ್ತು. ಅವು ಪ್ರಯಾಣಿಕರನ್ನು ಕೊಂದು ತಿಂದು, ಅವರ ಬಳಿಯಿದ್ದ ಧನಾಭರಣಗಳನ್ನು ಗುಹೆಗಳಲ್ಲಿ ಬಚ್ಚಿಡುತ್ತಿದ್ದವು!

ಈ ಅರಣ್ಯದ ಹತ್ತಿರದಲ್ಲೇ ಒಂದು ಗ್ರಾಮವಿತ್ತು, ಅಲ್ಲೊಬ್ಬ ನಾಪಿತನಿದ್ದ. ಅವನ ಹೆಸರು ಗೋವಿಂದಯ್ಯ. ಅವನು ಬಡವ. ಆದರೆ ತುಂಬಾ ಚುರುಕುಬುದ್ಧಿ, ಅಪ್ರತಿಮ ಸಾಹಸಿ. ಹಗಲು ಹೊತ್ತಿನಲ್ಲಿ ಹುಲಿಗಳು ನಿದ್ದೆಮಾಡುವವು. ಅವುಗಳಿಂದ ಹತರಾದ ಮಾನವರ ಧನಾಭರಣಗಳು ಅಡವಿಯಲ್ಲಿ ಹುಡುಕಿನೋಡಿದರೆ ಸಿಗಬಹುದೆಂದು ಅವನು ಯೋಚಿಸಿದ. ಅಂತಲೇ ಒಂದು ದಿನ ತನ್ನ ಹಡಪವನ್ನು ಕಂಕುಳಲ್ಲಿ ಇಟ್ಟುಕೊಂಡು, ಒಂದು ಕ್ಷೌರದ ಕತ್ತಿಯನ್ನು ಹಿಡಿದು ಅಡವಿಗೆ ತೆರಳಿದ.

ತುಸದೂರ ಹೋಗಲು ಒಂದು ಹುಲಿ ಎದುರಾಗಿ ಬಂದಿತು. ಬುದ್ಧಿಶಾಲಿಯಾದ ಗೋವಿಂದಯ್ಯ ಹೆದರಲಿಲ್ಲ; ಒಳ್ಳೇ ಧೈರ್ಯದಿಂದ, "ಹೂಂ, ಬಂದೆಯಾ, ಅಂಜಬೇಡ. ನಿನ್ನನ್ನು ಕೊಲ್ಲುವುದಿಲ್ಲ. ನಿನ್ನ ಮೀಸೆಗಳು ಮಹಾಸ್ವಾಮಿಯವರಿಗೆ ಬೇಕಂತೆ. ಅವುಗಳನ್ನು ಮಾತ್ರ ಕತ್ತರಿಸಿಕೊಂಡು ಹೋಗುತ್ತೇನೆ. ಅವರು ನನಗೆ ಬಹುಮಾನ ಕೊಡುತ್ತಾರೆ" ಎಂದು ಗಂಭೀರವಾಗಿ ನುಡಿದನು. ಹುಲಿ ಗಾಬರಿಗೊಂಡಿತು.

"ಅಣ್ಣಾ, ನನ್ನನ್ನು ರಕ್ಷಿಸು. ಈ ಮೀಸೆಗಳಿಲ್ಲದಿದ್ದರೆ ನನ್ನ ಪಾಡು ನಗೆಪಾಟಲಾಗುವುದು. ಮಹಾರಾಜರು ಕೊಡಬಹುದಾದ ಬಹುಮಾನವನ್ನು ನಾನೇ ಕೊಡುತ್ತೇನೆ" ಎಂದು ಅತಿ ದೈನ್ಯದಿಂದ ನುಡಿಯಿತು.

"ಸರಿ, ನೀನು ಈ ಪರಿ ಪ್ರಾರ್ಥಿಸುತ್ತಿರುವುದರಿಂದ ನಿನ್ನಿಷ್ಟಪ್ರಕಾರವೇ ನಡೆದುಕೊಳ್ಳುವೆನು," ಎಂದ ಗೋವಿಂದಯ್ಯ.

ಆ ಹುಲಿ ಗೋವಿಂದಯ್ಯನನ್ನು ಒಂದು ಗುಹೆಯೊಳಕ್ಕೆ ಕರೆದುಕೊಂಡು ಹೋಗಿ ಹಣದ ಚೀಲವೊಂದನ್ನು ತೋರಿಸಿತು. ಗೋವಿಂದಯ್ಯ ಆನಂದದಿಂದ ಆ ಚೀಲವನ್ನು

ಬಿ. ಗಣೇಶರಾವ್



ತೆಗೆದುಕೊಂಡು ಮನೆಗೆ ಹಿಂತಿರುಗಿದನು. ಮನೆಯೊಳಗೆ ಆತನು ಚೀಲವನ್ನು ಬಿಚ್ಚಿ ಅದರಲ್ಲಿದ್ದ ಹಣವನ್ನು ಎಣಿಸುತ್ತಿರುವ ಸಮಯಕ್ಕೆ ನೆರೆಮನೆ ರಂಗಪ್ಪ ಅಲ್ಲಿಗೆ ಬಂದ. ರಂಗಪ್ಪ ಕಸಬಿನಿಂದ ಸೌದೆಸೀಳುವಾತ.

ನಡೆದ ವಿಷಯವನ್ನೆಲ್ಲಾ ಅವನೊಂದಿಗೆ ಹೇಳಿದ ಗೋವಿಂದಯ್ಯ. ತಾನೂ ಸಹ ಹುಲಿಯನ್ನು ಬೆದರಿಸಿ ಧನಿಕನಾಗುವೆನೆಂದು ಮಾರನೆಯ ದಿನವೇ ಗಂಡುಗೊಡಲಿಯನ್ನು ಭುಜದ ಮೇಲೆ ಹಾಕಿಕೊಂಡು ಅಡವಿಯಕಡೆ ನಡೆದ ರಂಗಯ್ಯ. ಅವನಿಗೂ ಒಂದು ಹುಲಿ ಕಾಣಿಸಿತು. "ಬೇಷ್. ಸಿಕ್ಕಿದೆಯಲ್ಲಾ ಸಂತೋಷ. ಸ್ವಲ್ಪ ಹೊತ್ತು ಹಾಗೇ ನಿಂತಿರು. ನಿನ್ನ ತಲೆ ಕಡಿದು ರಾಜನಿಗೆ ಕಾಣಿಕೆ ಕೊಟ್ಟರೆ, ನನಗೆ ಭಾರಿ ಬಹುಮಾನ ಸಿಗುತ್ತದೆ" ಎಂದು ರಂಗಪ್ಪ ಗುಡುಗಿದ. ಕೊಡಲಿಯನ್ನು ಮೇಲಕ್ಕೆತ್ತಿ ಹುಲಿಯಮೇಲೆ ಹಾರಿದ.

ಆ ಹುಲಿ ಭಯದಿಂದ ನಡುಗಿ "ಅಯ್ಯಾ, ನನ್ನ ಪ್ರಾಣವನ್ನು ಕಾಪಾಡು. ಮಹಾರಾಜರು ಕೊಡುವ ಬಹುಮಾನಕ್ಕೆ ಎರಡರಷ್ಟು ನಾನೇ ನಿನಗೆ ಕೊಡುತ್ತೇನೆ" ಎಂದಿತು. "ಎಲ್ಲಿ, ನೋಡೋಣ, ನಡಿ" ಎಂದ ರಂಗಪ್ಪ.

ಹುಲಿ ಅವನನ್ನು ತನ್ನ ಗುಹೆಗೆ ಕರೆದೊಯ್ದು, ಅಲ್ಲಿ ಶೇಖರಿಸಿಟ್ಟಿದ್ದ ನಗನಾಣ್ಯಗಳನ್ನು ತೋರಿಸಿತು. ರಂಗಪ್ಪ, ಲಗುಬಗನೆ ಅವುಗಳನ್ನು ಮೂಟೆ ಕಟ್ಟಿಕೊಂಡು ಮನೆಗೆ ಹೊತ್ತುಕೊಂಡು ನಡೆದ.

ಈ ವಿಷಯ ಗೋವಿಂದಯ್ಯನಿಗೆ ತಿಳಿಯಿತು. ಅವನ ಆಶೆ ಹೆಚ್ಚಾಯಿತು. ಅವನು ರಂಗಪ್ಪನೊಂದಿಗೆ "ಮಾವಯ್ಯಾ, ಈ ರೀತಿ ನಾವು ಒಂದೊಂದೇ ಹುಲಿಯನ್ನು ಬೆದರಿಸಿ ಲಾಭವಿಲ್ಲ. ಎಲ್ಲ ಹುಲಿಗಳನ್ನೂ ಒಟ್ಟಿಗೆ ಹೆದರಿಸಿದರೆ ಮುಂದಿನ ಪೀಳಿಗೆಯವರಿಗೂ ದಾರಿದ್ರ್ಯವಿರುವುದಿಲ್ಲ. ನಿನ್ನ ಅಭಿಪ್ರಾಯ ವೇನು?" ಎಂದು ಕೇಳಿದ.

ರಂಗಪ್ಪ ಗೋವಿಂದಯ್ಯನಷ್ಟು ಸಾಹಸಿಯಲ್ಲ. ಆದರೆ ಗೋವಿಂದಯ್ಯನ ಪ್ರೋತ್ಸಾಹದಿಂದ ಒಪ್ಪಿಕೊಂಡ. ಇಬ್ಬರೂ ಒಟ್ಟಾಗಿ ಅರಣ್ಯಕ್ಕೆ ಹೋದರು. ಒಂದು ಎತ್ತರವಾದ ಮರವನ್ನೇರಿ ಹುಲಿಗಳ ಗುಂಪು ಕಾಣಿಸುವುದೇನೋ ಎಂದು ನೋಡುತ್ತಿದ್ದರು.

ಇಷ್ಟರಲ್ಲಿ ಅಡವಿಯಲ್ಲಿದ್ದ ಹುಲಿಗಳೆಲ್ಲಾ ಒಂದೆಡೆ ಸೇರಿ ಸಭೆ ನಡೆಯಿಸಿದವು. ಇಬ್ಬರು ಮಾನವರು ಎರಡು ಹುಲಿಗಳನ್ನು ಬೆದರಿಸಿ, ಧನ ಅಪಹರಿಸುವುದೆಂದರೇನು? "ನಮ್ಮ ಆಹಾರವಾದ ಮಾನವರು ನಮ್ಮನ್ನು ಹೆದರಿಸುವುದೆಂದರೇನು?" ಎಂದು ಹರೆಯದಲ್ಲಿದ್ದ ಹುಲಿಗಳು ಹುಂಕರಿಸಿದವು.

ಆದರೆ ಒಂದು ಮುದಿಹುಲಿ "ತಮ್ಮಂದಿರಾ, ಸೃಷ್ಟಿಯಲ್ಲಿ ನಾವೇ ಅತಿ ಕಠಿನಾತ್ಮರೂ, ಭೀಕರ ಸ್ವರೂಪಿಗಳೂ ಎಂದು ತಿಳಿಯಬೇಡಿ. ಧನದಾಶೆಗೆ ಒಳಗಾದ ಮಾನವನಿಗಿಂತ ಕ್ರೂರವಾದ, ಭಯಂಕರವಾದ ಪ್ರಾಣಿ ಸೃಷ್ಟಿಯಲ್ಲೇ ಇಲ್ಲ. ಆದುದರಿಂದ ನನ್ನ ಸಲಹೆ ಏನೆಂದರೆ ಇನ್ನು ಮುಂದೆ ನಾವು ಒಬ್ಬೊಂಟಿಗರಾಗಿ ಸುತ್ತಾಡುವುದು ಬೇಡ. ಗುಂಪುಗುಂಪಾಗಿ ಓಡಾಡುವ. ಒಗ್ಗಟ್ಟೇ ನಮಗೆ ಪ್ರಾಣರಕ್ಷೆಯಾಗಲಿ" ಎಂದು ಬುದ್ಧಿವಾದ ಹೇಳಿತು.

ಸಭೆ ಮುಗಿದನಂತರ ಹುಲಿಗಳೆಲ್ಲಾ ಗೋವಿಂದಯ್ಯ ರಂಗಪ್ಪರು ಏರಿದ್ದ ಮರದ ಕಡೆ ಬರುತ್ತಿದ್ದವು. ಅಷ್ಟೊಂದು ಹುಲಿಗಳನ್ನು ಒಂದೇಬಾರಿಗೆ ನೋಡಿದಕೂಡಲೇ ರಂಗಪ್ಪನ ಮೈ ಬೆವರಿತು. ಕೈಹಿಡಿತ ತಪ್ಪಿ ಅವನು ಮರದಮೇಲಿಂದ ಕೆಳಗೆ ಬೀಳ ತೊಡಗಿದನು. ಅವನ ಭಾರದಿಂದ ಕೆಲವಾರು ಕೊಂಬೆಗಳು ಪಟಪಟನೆ ಮುರಿದು ಬೀಳುತ್ತಿದ್ದವು. ಆಗ ನಾಪಿತನು ತುಂಬಾ ಸಮಯಸ್ಫೂರ್ತಿಯಿಂದ "ಹಿಡಿ, ಹುಲಿಗಳನ್ನೆಲ್ಲಾ ಹಿಡಿ. ಓಡಿಹೋಗಲು ಒಂದನ್ನೂ ಬಿಡಬೇಡ" ಎಂದು ಗಟ್ಟಿಯಾಗಿ ಕೂಗಿಕೊಂಡ.

ಈ ಕೂಗಾಟವನ್ನೂ, ಬೀಳುತ್ತಿರುವ ಮನುಷ್ಯನನ್ನೂ ಕಂಡು ಹುಲಿಗಳು ಪೂರ್ತಿ ಹೆದರಿ ತಲಾ ಒಂದೊಂದು ದಿಕ್ಕಿಗೆ ಓಡಿದವು. ಅನಂತರ ನಾಪಿತನು ನಿಧಾನವಾಗಿ ಮರದಿಂದ ಕೆಳಗೆ ಇಳಿದುಬಂದನು. ಇಬ್ಬರೂ ಆ ಸುತ್ತಮುತ್ತಲಿದ್ದ ಗುಹೆಗಳಿಗೆ ನುಗ್ಗಿ, ಅಲ್ಲಿದ್ದ ಹಣ ಕಾಸುಗಳನ್ನು ಕೊಳ್ಳೆಹೊಡೆದು, ಸಮ ಭಾಗವಾಗಿ ಹಂಚಿಕೊಂಡರು.

ಹೀಗೆ ಅವರು ಹುಲಿಗಳ ತೊಂದರೆಯನ್ನು ತಪ್ಪಿಸಿದ್ದಕ್ಕಾಗಿ ಮಹಾರಾಜರೂ ಅವರಿಗೆ ಬಹುಮಾನಗಳನ್ನು ಕೊಟ್ಟರು.






ಹಿಂದೆ ರಷ್ಯಾದೇಶದಲ್ಲಿ ಮಾರ್‍ಕಾ ಎಂಬ ಸಂಪನ್ನನಿದ್ದನು. ಆತನಂತಹ ಜಿಪುಣಾಗ್ರೇಸರ ಪ್ರಪಂಚದಲ್ಲೇ ಮತ್ತೆ ಯಾರೂ ಇರಲಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಒಂದು ದಿನ ಮಾರ್‍ಕಾ ಬೀದಿಯಲ್ಲಿ ಹೋಗುತ್ತಿರುವಾಗ ವೃದ್ಧನೊಬ್ಬನು "ಸ್ವಾಮಿ, ನನಗೊಂದು ಅರ್ಧಾಣೆ ಧರ್ಮಮಾಡಿ" ಎಂದು ದೈನ್ಯದಿಂದ ಕೇಳಿದನು. ಬಿಕ್ಷುಕನ ಆರ್ತನಾದ ಮಾರ್‍ಕಾ ಕಿವಿಯಮೇಲೆ ಹಾಕಿಕೊಳ್ಳದಿದ್ದರೂ ತನ್ನ ಹಿಂದೆಯೇ ಬರುತ್ತಿದ್ದ ಬಡ ರೈತನು ಕಿಸೆಯಿಂದ ಅರ್ಧಾಣೆ ತೆಗೆದು ಆ ಭಿಕ್ಷುಕನಿಗೆ ಕೊಡುವುದನ್ನು ಆತನು ಕಂಡ.

ಮಾರ್‍ಕಾಗೆ ನಾಚಿಕೆ ಆಯಿತು. ಆತನು ನಿಂತು ರೈತನನ್ನು ಉದ್ದೇಶಿಸಿ "ನನ್ನ ಹತ್ತಿರ ಚಿಲ್ಲರೆ ಹಣವಿಲ್ಲ, ಈ ಬಿಕ್ಷಕನಿಗೆ ಕೊಡಲು ಒಂದು ಅರ್ಧಾಣೆ ಕೊಡುವೆಯಾ? ನಾನು ಯಾರೋ ನಿನಗೆ ತಿಳಿದಿರುವುದಷ್ಟೆ?" ಎಂದ.

ಆ ಬಡ ರೈತನು ಅರ್ಧಾಣೆಯನ್ನು ಮಾರ್‍ಕಾಗೆ ಕೊಡುತ್ತಾ" ನಾನು ಈ ಅರ್ಧಾಣೆಗಾಗಿ ನಿಮ್ಮ ಬಳಿ ಎಂದು ಬರಲಿ?" ಎಂದು ಕೇಳಿದ. 'ನಾಳೆ ಬಾ' ಎಂದ ಮಾರ್‍ಕಾ.

ಮಾರನೇಯದಿನ ಬೆಳಗ್ಗೆ ರೈತನು ಮಾರ್‍ಕಾ ಮನೆಗೆ ಹೋದ. ಆತನನ್ನು ನೋಡಿದ ಕೂಡಲೇ ಮಾರ್‍ಕಾ "ಓ, ಅರ್ಧಾಣೆಗಾಗಿ ಬಂದೆಯಾ? ಚಿಲ್ಲರೆ ಇಲ್ಲವಲ್ಲಾ, ನಾಳೆ ಬರಲು ಸಾಧ್ಯವೇ?" ಎಂದ.

ಆ ಮಾರನೇಯ ದಿನವೂ ರೈತ ಬಂದ.

"ತ್ಸು, ನೀನೇನೋ ಬಂದೆ. ಈ ಸಮಯಕ್ಕೇ ನನ್ನಹತ್ತಿರ ಚಿಲ್ಲರೆ ಇರಬಾರದೆ? ಒಂದು ಕೆಲಸ ಮಾಡುವೆಯಾ? ನಿನ್ನ ಹತ್ತಿರ ತೊಂಬತ್ತೊಂಬತ್ತು ರೂಪಾಯಿ, ಹದಿನೈದು ವರೆ ಆಣೆ ಇದ್ದರೆ ಕೊಡು, ನಾನೊಂದು ನೂರು ರೂಪಾಯಿನ ನೋಟು ಕೊಡುತ್ತೇನೆ" ಎಂದ.

ತನ್ನಹತ್ತಿರ ಅಷ್ಟೊಂದು ಹಣವಿಲ್ಲವೆಂದು ಹೇಳಿದ ಬಡರೈತ. "ಹಾಗಾದರೆ ಒಂದೆರಡು ವಾರವಾದ ನಂತರ ಬಾ. ಖಂಡಿತವಾಗಿ ಕೊಡುತ್ತೇನೆ" ಎಂದ ಮಾರ್‍ಕಾ. ಆ ಪ್ರಕಾರವೇ ರೈತನು ಎರಡು ವಾರದನಂತರ

ಎಸ್. ಕೆ. ರತ್ನಯ್ಯಶೆಟ್ಟಿ

ಮಾರ್ಕಾ ಮನೆಗೆ ಹೊರಟ. ಆತನು ಅಷ್ಟು ದೂರದಲ್ಲಿ ಬರುತ್ತಿರುವುದನ್ನು ಕಂಡ ಮಾರ್ಕಾ ಗಬಗಬನೆ ಹೆಂಡತಿಯ ಹತ್ತಿರಕ್ಕೆ ಹೋಗಿ "ಲೇ, ನಾನು ಚಾಪೆಯಮೇಲೆ ಮಲಗಿಕೊಳ್ಳುವೆನು. ನನ್ನ ಮೇಲೆ ಬಟ್ಟೆಯೊಂದನ್ನು ಹೊದಿಸಿ, ತಲೆಯುಬಳಿ ದೀಪವನ್ನು ಇಟ್ಟುಬಿಡು. ನನಗೋಸ್ಕರ ಬಡರೈತನು ಬರುತ್ತಿದ್ದಾನೆ. ಬೆಳಗ್ಗೆ ಸತ್ತುಹೋದೆನೆಂದು ಹೇಳಿಬಿಡು. ಪೀಡೆ ಕಳೆಯುತ್ತದೆ" ಎಂದ.

ಮಾರ್ಕಾ ಹೇಳಿದಪ್ರಕಾರ ಆತನ ಮಡದಿ ಮಾಡಿದಳು. ಗಂಡನ ಸಮೀಪದಲ್ಲಿ ಕುಳಿತುಕೊಂಡು ಅಳಲು ಪ್ರಾರಂಭಿಸಿದಳು. ರೈತನು ಮನೆಯೊಳಗೆ ಕಾಲಿಟ್ಟ ಕೂಡಲೇ "ನಿನ್ನ ಮಾತು ಹೇಳುತ್ತಾ ಸತ್ತುಹೋದರಪ್ಪಾ. ಅಯ್ಯೋ" ಎಂದು ಗೋಳಿಟ್ಟಳು.

"ಎಲಾ, ಇವನ. ಹೋಗಿಹೋಗಿ ನನ್ನ ಸಾಲತೀರಿಸದೆ ಸತ್ತುಹೋದನೆ! ಪಾಪಿ. ಆದರೇನುಮಾಡುವಹಾಗಿದೆ. ಖರ್ಚಿನೊಂದಿಗೆ ಖರ್ಚು. ಶವಕ್ಕೆ ಸ್ನಾನಮಾಡಿಸಬೇಕಷ್ಟೆ" ಎಂದು ಅವನು ಅವಡುಕಚ್ಚಿ ಹಿತ್ತಲಿಗೆ ಹೋಗಿ ಗಂಗಾಳದಲ್ಲಿ ಕುದಿಯುತ್ತಿದ್ದ ನೀರನ್ನು ಒಂದು ಬಾಲಿದಿಯಲ್ಲಿ ತಂದು ಮಾರ್ಕಾನಮೇಲೆ ಸುರಿದ. ಆ ಬಾಧೆಯನ್ನು ಮಾರ್ಕಾ ಅತಿ ಪ್ರಯಾಸದಿಂದ ಪಡೆದುಕೊಂಡನಾದರೂ ಅವನ ಕಾಲುಗಳು ಸ್ವಲ್ಪ ಚಲಿಸಿದವು. ಅದನ್ನು ಕಂಡು "ಕಾಲು ಆಡಿಸುವುದಿರಲಿ. ಈಗಲಾದರೂ ನನ್ನ ಅರ್ಧಾಣೆ ಕೊಡು




ವೆಯಾ ಹೇಗೆ?" ಎಂದ ಬಡರೈತ. ಮಾರ್ಕಾನಿಂದ ಯಾವ ಉತ್ತರವೂ ಬರಲಿಲ್ಲ.

"ಶವವಿಡಲು ಪೆಟ್ಟಿಗೆ ತರಿಸಿ. ಆಲಯಕ್ಕೆ ತೆಗೆಯಿಸಿಕೊಂಡು ಹೋಗಿ ಅಭಿಷೇಕ ಮಾಡಿಸಿದನಂತರ ಸುಡುಗಾಡಿನಲ್ಲಿ ಸಮಾಧಿಮಾಡಿಸುವೆನು" ಎಂದು ಮಾರ್ಕಾನ ಹೆಂಡತಿಗೆ ಹೇಳಿದ ಆ ರೈತ. ಮರುಮಾತನಾಡದೆ ಮಾರ್ಕಾನ ಹೆಂಡತಿ ಶವದಾನಿ ತರಿಸಿದಳು. ರೈತನು ಮಾರ್ಕಾನನ್ನು ಪೆಟ್ಟಿಗೆಯಲ್ಲಿಟ್ಟು, ಆಲಯಕ್ಕೆ ಹೊರಿಸಿಕೊಂಡು ಹೋದ. ಅಲ್ಲಿ ಕತ್ತಲಾಗುವವರೆವಿಗೂ ಪೂಜೆ, ಅಭಿಷೇಕ ಮುಂತಾದುವುಗಳನ್ನು ಮಾಡಿಸಿದ. ರಾತ್ರಿ ಬಹಳವಾದುದರಿಂದ ರೈತನೊಬ್ಬನೇ ಆ ಆಲಯದಲ್ಲೆ ಉಳಿದುಬಿಟ್ಟ.

ಅರ್ಧರಾತ್ರಿ ವೇಳೆಗೆ ನಾಲ್ವರು ಕಳ್ಳರು ಆಲಯದೊಳಕ್ಕೆ ಪ್ರವೇಶಿಸಿದರು. ಅವರ ಸಪ್ಪಳ ಕೇಳಿ ರೈತನು ಭಯದಿಂದ ವಿಗ್ರಹದ ಹಿಂದೆ ಅಡಗಿಕೊಂಡನು. ಕಳ್ಳರೂ ಎಲ್ಲಿಂದಲೋ ಹೇರಳವಾಗಿ ಹಣವನ್ನು ಲೂಟಿಮಾಡಿಕೊಂಡು ಬಂದಿದ್ದರು. ಅವುಗಳನ್ನು ಆಲಯದ ಅಂಗಳದಲ್ಲಿ ಹರಡಿ, ಹಂಚಿಕೊಳ್ಳುವುದರಲ್ಲಿ ಮಗ್ನರಾದರು. ಎಲ್ಲವನ್ನೂ ಸರಿಸಮನಾಗಿ ಹಂಚಿಕೊಂಡ ನಂತರ ಒಂದು ಚಿನ್ನದ ಹಿಡಿಯುಳ್ಳ ಖಡ್ಗವು ಉಳಿಯಿತು. ಅದರ ವಿಷಯವಾಗಿ ಅವರೊಳಗೆ ಹೊಡೆದಾಟ ಬಡಿದಾಟಕ್ಕೆ ಪ್ರಾರಂಭವಾಯಿತು.

ಆಗ ವಿಗ್ರಹದ ಹಿಂದಿದ್ದ ರೈತನು ಗಂಭೀರ ಧ್ವನಿಯಲ್ಲಿ "ಖಡ್ಗಕ್ಕಾಗಿ ಹಾಗೇಕೆ ಕಿತ್ತಾಡುವಿರಿ? ಆ ಶವವಾಹಿಯಲ್ಲಿರುವ ಶವದ ಕತ್ತನ್ನು ಯಾರು ಕೊಯ್ಯುವರೋ ಅವರಿಗೇ ಅದು ಸೇರತಕ್ಕದ್ದು" ಎಂದ.

ಈ ಮಾತುಗಳನ್ನು ಕೇಳಿದಕೂಡಲೇ ಮಾರ್ಕಾ ಬೆಚ್ಚಿಬಿದ್ದು ದಿಗ್ಗನೆ ಎದ್ದು ನಿಂತು "ಅಯ್ಯೋ ಅಯ್ಯೋ, ನನ್ನ ಕತ್ತುಕೊಯ್ಯುವಿರಾ?" ಎಂದು ಭೀತಿಯಿಂದ ಬೊಬ್ಬಿಟ್ಟ. ಇದನ್ನು ಕಂಡು ಕಳ್ಳರು ವಿಸ್ಮಯಹೊಂದಿದರು. ಮತ್ತು ಹೆದರಿ ಪಲಾಯನ ಮಾಡಿದರು. ಆಗ ರೈತನು ವಿಗ್ರಹದ ಹಿಂದಿನಿಂದ ಹೊರಗೆ ಬಂದ. "ನೋಡಯ್ಯಾ, ಆದದ್ದೇನೋ ಆಗಿಹೋಯಿತು. ಇನ್ನು ಮನಸ್ತಾಪ ಏಕೆ? ಒಂದೇಬಾರಿಗೆ ಸಿರಿಸಂಪದಗಳು ನಮ್ಮ ಪಾಲಿಗೆ ಬಂದಿವೆ. ಮೂರನೇಯವನ ಕಣ್ಣಿಗೆ ಬೀಳದಂತೆ ಇದನ್ನು ಹಂಚಿಕೊಳ್ಳೋಣ, ಹಿಡಿ" ಎಂದ ಮಾರ್ಕಾ ಬಡರೈತನೊಂದಿಗೆ.

ರೈತನು ಈ ಏರ್ಪಾಟಿಗೆ ಒಪ್ಪಿಕೊಂಡ. ಕಳ್ಳರು ತ್ಯಜಿಸಿ ಹೋಗಿದ್ದ ಮಾಲನ್ನು ಇಬ್ಬರೂ ಹಂಚಿಕೊಂಡರು. "ಇನ್ನು ಹೋಗೋಣ ನಡೆ" ಎಂದ ಮಾರ್ಕಾ.

"ಸರಿ, ನನ್ನ ಅರ್ಧಾಣೆಯ ಮಾತೇನಾಯಿತು?" ಎಂದು ಕೇಳಿದ ರೈತ.

"ನೀನೇ ನೋಡುತ್ತಿರುವೆ. ಚಿಲ್ಲರೆ ಎಲ್ಲಿದೆ ಹೇಳು? ನಾಳೆ ಬಂದುಬಿಡು. ಕೊಡುತ್ತೇನೆ" ಎಂದ ಮಾರ್ಕಾ. ಹೀಗೆ ಅನೇಕ ನಾಳೆಗಳು ಕಳೆದರೂ ರೈತನಿಗೆ ಅರ್ಧಾಣೆ ಸೇರಲೇ ಇಲ್ಲ!





# ಅದೃಷ್ಟ

ಮಧುಗಿರಿಯಲ್ಲಿ ಇಬ್ಬರು ಅಣ್ಣತಮ್ಮಂದಿರಿದ್ದರು. ಹಿರಿಯವನು ಬಡವರಮನೆ ಹೆಣ್ಣನ್ನು ಮದುವೆಯಾಗಿದ್ದ; ಕಿರಿಯವನು ಭಾಗ್ಯವಂತರ ಮನೆ ಹುಡುಗಿಯನ್ನು ವಿವಾಹ ಮಾಡಿಕೊಂಡಿದ್ದ. ಈ ಕಾರಣದಿಂದ ಓರಗಿತ್ತಿಯರಲ್ಲಿ ಹೊಂದಾಣಿಕೆ ಇರಲಿಲ್ಲ. 'ನಾನು ಮನೆಗೆ ಹಿರಿಯ ಸೊಸೆ. ನನ್ನ ಮಾತು ನೀನು ಕೇಳಬೇಕು' ಎಂದೆನ್ನುವಳು ಹಿರಿಯಾಕೆ. 'ನಾನು ಹಣವಂತರ ಮನೆ ಹೆಣ್ಣು. ನನ್ನ ಇಷ್ಟಪ್ರಕಾರ ನೀನು ನಡೆಯಬೇಕು' ಎಂದು ವಾದಿಸುವಳು ಕಿರಿಯವನ ಹೆಂಡತಿ.

ಇದರಿಂದ ನೊಂದು ಸಹೋದರರು ಬೇರೆ ಬೇರೆಯಾದರು. ಅಣ್ಣನಿಗೆ ಪ್ರತಿ ವರ್ಷವೂ ಮಕ್ಕಳಾಗಿ ಸಂಸಾರ ದೊಡ್ಡದಾಗುತಲಿತ್ತು. ಖರ್ಚು ಮಿತಿಮೀರಿ, ಕೆಲವಾರು ವರ್ಷಗಳಿಗೆಲ್ಲಾ ಆತನಿಗೆ ದಾರಿದ್ರ್ಯ ಪ್ರಾಪ್ತವಾಯಿತು. ತಮ್ಮನು ಮುಟ್ಟಿದ್ದೆಲ್ಲಾ ಚಿನ್ನವಾಗಿ ಆತನ ಆಸ್ತಿ ವೃದ್ಧಿಯಾಗುತಲಿತ್ತು. ಹೀಗಿರುವಾಗ ಒಂದಾವರ್ತಿ ಅಣ್ಣನು ತಮ್ಮನ ಬಳಿಗೆ ಹೋಗಿ "ತಮ್ಮಾ, ನನ್ನ ಹೊಲ ಉಳಬೇಕಾಗಿದೆ. ಎರಡು ದಿನ ನಿನ್ನ ಎತ್ತುಗಳನ್ನು ಎರವಲು ಕೊಡುವೆಯಾ?" ಎಂದು ಕೇಳಿದ.

"ಇಂದು ಒಂದು ಜೊತೆ, ನಾಳೆ ಮತ್ತೊಂದು ಜೊತೆ ಪ್ರಕಾರ ತೆಗೆದುಕೊಂಡು ಹೋಗು. ಎತ್ತುಗಳನ್ನು ಹೆಚ್ಚಾಗಿ ಆಯಾಸಗೊಳಿಸಬೇಡ. ಜಾಗ್ರತೆ. ನನ್ನ ಎತ್ತುಗಳು ಹೊಲದಲ್ಲೇ ಇವೆ. ನಾನು ಹೇಳಿದೆನೆಂದು ಹೇಳಿ ಒಂದು ಜೊತೆ ಎತ್ತುಗಳನ್ನು ಅಟ್ಟಿಕೊಂಡು ಹೋಗು" ಎಂದ ತಮ್ಮ.

ಅಣ್ಣ ಹೊಲಕ್ಕೆ ಹೋಗಿ ಅಲ್ಲಿನ ದೃಶ್ಯವನ್ನು ಕಂಡು ಚಕಿತನಾದ. ತಮ್ಮನ ಎತ್ತುಗಳನ್ನು ಯಾರೋ ನೇಗಿಲಿಗೆ ಕಟ್ಟಿ ಉಳುತ್ತಿದ್ದರು. "ಇದು ನನ್ನ ತಮ್ಮನ ಹೊಲ. ನೀನು ಯಾರು? ಏಕೆ ಈ ಹೊಲವನ್ನು ಉಳುತ್ತಿರುವೆ?" ಎಂದು ಕೇಳಿದ ಅಣ್ಣ.

"ನಾನು ನಿನ್ನ ತಮ್ಮನ ಅದೃಷ್ಟ. ನಿನ್ನ ತಮ್ಮ ಸುಮ್ಮನೆ ಕುಳಿತಿದ್ದರೂ ನಾನು ಆತನಿಗಾಗಿ ಈ ಹೊಲವನ್ನು ಉಳುತ್ತಿದ್ದೇನೆ,"

ಪಿ. ಜೂಜಪ್ಪ



ಎಂದ. "ಹಾಗಾದರೆ ನನ್ನ ಅದೃಷ್ಟದ ವಿಷಯವೇನು?" ಎಂದು ಕೇಳಿದ ಅಣ್ಣ.

"ಅಯ್ಯೋ ಅವನ ವಿಷಯ ಏಕೆ ನೆನೆಯುವಿರಿ? ಆತ ಶುದ್ಧ ಸೋಮಾರಿ. ಅದೋ ಅಲ್ಲಿ ಕಾಣಿಸುತ್ತಿರುವ ಪೊದೆಯ ಹಿಂದೆ ಮಲಗಿಕೊಂಡು ಗೊರಕೆ ಹೊಡೆಯುತ್ತಿದ್ದಾನೆ" ಎಂದ ತಮ್ಮನ ಅದೃಷ್ಟ.

"ಹಾಂ, ಇದೇ ಇವನು ಮಾಡುತ್ತಿರುವ ಕೆಲಸ" ಎಂದು ಅಣ್ಣನು ಅಲ್ಲೇ ಇದ್ದ ಒಂದು ಬಿದಿರುಕೋಲನ್ನು ಹಿಡಿದುಕೊಂಡು ಪೊದೆಯ ಬಳಿಗೆ ಹೋಗಿ, ನಿಶ್ಚಿಂತೆಯಾಗಿ ಮಲಗಿ ನಿದ್ದೆ ಮಾಡುತ್ತಿದ್ದ ತನ್ನ ಅದೃಷ್ಟವನ್ನು ನೋಡಿದ.

ಚುರ್ರನೆ ಎರಡು ಏಟು ಬೀಳಲು ಅಣ್ಣನ ಅದೃಷ್ಟ ಎದ್ದು ಕುಳಿತು "ನನ್ನನ್ನು ಏಕೆ ಹೊಡೆಯುತ್ತಿರುವೆ? ನಾನು ನಿನಗೆ ಮಾಡಿದ ಹಾನಿಯಾದರೂ ಏನು?" ಎಂದ.

"ಇನ್ನೇನು ಮಾಡಬೇಕು ಹೇಳು. ನಿನ್ನ ಪಾಟಿಯಾದವನು ನನ್ನ ತಮ್ಮನನ್ನು ಕೂರಿಸಿ ಹೊಲ ಉಳುತ್ತಿದ್ದರೆ, ನೀನು ನಿಶ್ಚಿಂತೆಯಾಗಿ ಮಲಗಿ ನಿದ್ದೆ ಮಾಡುತ್ತಿರುವೆಯಾ?" ಎಂದು ಮತ್ತೆ ಕೋಲನ್ನು ಎತ್ತಿದ.

"ನಿಲ್ಲು, ನಿಲ್ಲು. ನನಗೆ ಹೊಲ ಉಳುವ ಕೆಲಸ ಸ್ವಲ್ಪವೂ ಬರುವುದಿಲ್ಲ. ಯಾವುದಾದರೂ ವ್ಯಾಪಾರದ ವಿಷಯ ಹೇಳು. ನನ್ನ ಪ್ರತಾಪ ತೋರಿಸುತ್ತೇನೆ" ಎಂದ ಅದೃಷ್ಟ.

"ವ್ಯಾಪಾರವೇ? ನನ್ನ ಹತ್ತಿರ ಬಂಡವಾಳವಿಲ್ಲವಲ್ಲಾ? ನಾನೇನು ವ್ಯಾಪಾರ ಮಾಡಬಲ್ಲೆ" ಎಂದ ಅಣ್ಣ. "ನಾನು ನಿನ್ನೊಂದಿಗೆ ಇರುವಾಗ ಬೇರೆ ಬಂಡವಾಳವೇಕೆ? ಹಳೇ ಬಟ್ಟೆಗಳದೋ ಮಣ್ಣಿನದೋ ವ್ಯಾಪಾರ ಮಾಡು. ಯಾವ ವ್ಯಾಪಾರ ಮಾಡಿದರೂ ನಿನ್ನ ಕೈಯಲ್ಲಿ ಲಕ್ಷ್ಮಿ ತಾಂಡವವಾಡುವಂತೆ ಮಾಡುತ್ತೇನೆ. ನನ್ನ ಶಕ್ತಿ ಪರೀಕ್ಷಿಸಬೇಕೆಂದರೆ ಕೂಡಲೇ ನಿಮ್ಮ ಸಾಮಾನುಗಳನ್ನು ಕಟ್ಟಿಕೊಂಡು ಪಟ್ಟಣಕ್ಕೆ ಪ್ರಯಾಣ ಕಟ್ಟು" ಎಂದ ಅದೃಷ್ಟ.

ಅಣ್ಣ ಪಟ್ಟಣಕ್ಕೆ ಹೋಗುತ್ತಿರಲು ಮನೆಯ ಮೇಲ್ಛಾವಣಿಯಿಂದ ಯಾರೋ ರೋದಿಸುವ ಧ್ವನಿ ಕೇಳಿಸಿತು. ಅಣ್ಣ ತಲೆ ಎತ್ತಿ ನೋಡಲು ಮನೆಯ ಸೂರಿನಿಂದ ವಿಕಾರಾಕೃತಿಯ ಹೆಂಗಸೊಬ್ಬಳು ನೇತಾಡುತ್ತಿರುವುದು ಕಾಣಿಸಿತು. "ಯಾರು ತಾಯಿ ನೀನು, ಏಕೆ ಅಳುತ್ತಿರುವೆ?

ಈ ಮನೆಗೆ ಎಂದು ಬಂದೆ?" ಎಂದು ಕೇಳಿದ.

"ಅಯ್ಯೋ, ಅಣ್ಣಾ. ನಾನು ಮೊದಲಿನಿಂದಲೇ ಈ ಮನೆಯನ್ನು ಆಶ್ರಯಿಸಿದ್ದೇನೆ. ನಾನು ನಿನ್ನ ದುರದೃಷ್ಟ. ಇಷ್ಟು ದಿನ ಹೇಗೋ ಹಾಯಾಗಿ ಕಳೆದುಹೋಯಿತು. ಈಗ ನನ್ನನ್ನು ಕೈಬಿಟ್ಟು ಹೊರಡುವಿರಾ? ಇದು ನಿಮಗೆ ಧರ್ಮವೇ?" ಎಂದು ಆಕೆ ಮತ್ತಷ್ಟು ಗಟ್ಟಿಯಾಗಿ ಅಳಲು ಪ್ರಾರಂಭಿಸಿದಳು.

"ಓ, ನೀನೋ! ನೀನು ನಮ್ಮೊಂದಿಗೆ ಬಾರದಿದ್ದರೆ ನಮಗೆ ಕಾಲ ಕಳೆಯುವುದಾದರೂ ಹೇಗೆ? ಬಾ, ಈ ಪೆಟ್ಟಿಗೆಯಲ್ಲಿ ಕುಳಿತುಕೋ. ಕರೆದುಕೊಂಡು ಹೋಗುತ್ತೇವೆ" ಎಂದು ಒಂದು ಸಂದೂಕದಲ್ಲಿ ತುಂಬಿಸಿದ್ದ ಸಾಮಾನುಗಳನ್ನೆಲ್ಲಾ ಖಾಲಿ ಮಾಡಿದ.

ಆತನ ದುರದೃಷ್ಟ ಆನಂದದಿಂದ ಸೂರಿನಿಂದ ಆ ಪೆಟ್ಟಿಗೆಯೊಳಕ್ಕೆ ಹಾರಿ ಕುಳಿತುಕೊಂಡಿತು. ಅಣ್ಣ ಪೆಟ್ಟಿಗೆಯ ಮುಚ್ಚಳವನ್ನು ಮುಚ್ಚಿ, ಬೀಗ ಹಾಕಿದ. ಆ ಪೆಟ್ಟಿಗೆಯನ್ನು ಹಿತ್ತಲಿಗೆ ತೆಗೆದುಕೊಂಡು ಹೋಗಿ ಒಂದು ಆಳವಾದ ಗುಂಡಿ ತೋಡಿ, ಅದರಲ್ಲಿ ಸಂದೂಕವನ್ನಿಟ್ಟು, "ಶಾಶ್ವತವಾಗಿ ಇಲ್ಲೇ ಬಿದ್ದಿರು. ಮತ್ತೆ ಕಾಣಿಸಿಕೊಂಡೆಯೋ ಚರ್ಮ ಸುಲಿದು ಬಿಟ್ಟೇನು" ಎಂದು ಹೇಳಿ, ತನ್ನ ಪತ್ನಿಯೊಂದಿಗೆ ಪಟ್ಟಣಕ್ಕೆ ಪ್ರಯಾಣ ಹೊರಟ.

ಪಟ್ಟಣದಲ್ಲಿ ಅಣ್ಣ ಹಳೇ ಬಟ್ಟೆಗಳ ವ್ಯಾಪಾರ ಪ್ರಾರಂಭಿಸಿದ. ಸಮಯ ಕೂಡಿಬಂದು ಅವುಗಳಿಗೆ ಭಾರಿ ಬೆಲೆ ಬಂದಿತು. ಆ ಹಣದಿಂದ ಹೊಸ ಬಟ್ಟೆಗಳನ್ನು ಕೊಂಡು



ಕೊಂಡು, ಮತ್ತೆ ಲಾಭಕ್ಕೆ ಮಾರಿದ. ಅಣ್ಣ ಯಾವ ವ್ಯಾಪಾರ ಮಾಡಿದರೂ ಹೆಚ್ಚಾಗಿ ಲಾಭ ಬರುತಿತ್ತು. ಹೀಗೇ ಕೆಲವು ದಿನಗಳಿ ಗೆಲ್ಲಾ ಅವನು ಶ್ರೀಮಂತನಾದ.

ಅಣ್ಣನು ಪಟ್ಟಣದಲ್ಲಿ ಧನವಂತನಾಗಿರುವ ನೆಂದು ಕೇಳಿ ತಮ್ಮನು ಆತನನ್ನು ನೋಡಲು ಪಟ್ಟಣಕ್ಕೆ ಬಂದ. "ಅಣ್ಣಾ, ನೀನು ಕೆಲವೇ ದಿನಗಳಲ್ಲಿ ಇಷ್ಟು ಹಣವನ್ನು ಹೇಗೆ ಸಂಪಾ ದಿಸಿದೆ? ಆ ಉಪಾಯವನ್ನು ನನಗೂ ಹೇಳ ಬಾರದೆ?" ಎಂದು ಕೇಳಿದ ತಮ್ಮ.

"ಅದೇನು ಬಿಡೋ. ನನ್ನ ಮನೆ ಸೂರಿಗೆ ನೇತಾಡುತ್ತಿದ್ದ ದುರದೃಷ್ಟವನ್ನು ಪೆಟ್ಟಿಗೆ ಯಲ್ಲಿಟ್ಟು ಬಾವಿಯ ಪಕ್ಕದಲ್ಲಿ ಗುಂಡಿಯನ್ನು ಅಗೆದು ಅಲ್ಲಿ ಹೂತಿಟ್ಟೆ. ಅಂದಿನಿಂದ ನನಗೆ ಶುಕ್ರದೆಸೆ ಬಂದಿತು" ಎಂದ ಅಣ್ಣ.

ಅಣ್ಣನ ಅದೃಷ್ಟ ನೋಡಿ ತಮ್ಮನಿಗೆ ಸಹನೆ ಯಾಗಲಿಲ್ಲ. ಆತನು ಅಣ್ಣನಿಂದ ಅಪ್ಪಣೆಪಡೆದು ಮೊದಲು ಅಣ್ಣನು ವಾಸಿಸುತ್ತಿದ್ದ ಮನೆಗೆ ಹೋದ. ಅವಸರವಸರವಾಗಿ ಬಾವಿಯ ಬಳಿಗೆ ಹೋಗಿ ಅಣ್ಣನು ಹೂತಿಟ್ಟಿದ್ದ ಸಂದೂಕ ವನ್ನು ಮೇಲೆತ್ತಿ, ಬೀಗ ಒಡೆದು, ದುರದೃಷ್ಟ ದೇವತೆಯನ್ನು ಹೊರಕ್ಕೆಬಿಟ್ಟ. ಪೆಟ್ಟಿಗೆಯಿಂದ ಹೊರಗೆ ಬಂದ ಕೂಡಲೇ ದುರದೃಷ್ಟದೇವತೆ "ಬಂದೆಯಾ ನನ್ನಪ್ಪಾ" ಎಂದು ತಮ್ಮನ ಹೆಗಲಿನಮೇಲೇರಿ ಕುಳಿತುಕೊಂಡಿತು.

"ನಾನಲ್ಲ ನಿನಗೆ ಬೇಕಾದ ಆಸಾಮಿ. ಇಳಿ, ಇಳಿ. ನನ್ನ ಅಣ್ಣ ಪಟ್ಟಣದಲ್ಲಿ ವಾಸಿಸು ತ್ತಿದ್ದಾನೆ" ಎಂದು ಮೊರೆಯಿಟ್ಟ ತಮ್ಮ.

"ಆ ದುರುಳನ ಮಾತೆತ್ತಬೇಡ. ನೀನೇ ಒಳ್ಳೆಯವನು. ನಿನಗೆಷ್ಟು ಭೂತದಯೆ. ಸದಾ ನಾನು ನಿನ್ನ ಬಳಿಯೇ ಇರುತ್ತೇನೆ" ಎಂದಿತು ದುರದೃಷ್ಟ ದೇವತೆ.

ಅಣ್ಣನನ್ನು ಕಂಡು ಅಸೂಯೆಗೊಂಡ ತಮ್ಮನಿಗೆ ತಕ್ಕ ಶಾಸ್ತಿ ಆಯಿತು. ಆತನು ದುರದೃಷ್ಟ ದೇವತೆಯನ್ನು ತನ್ನ ಹೆಗಲಿನ ಮೇಲಿಂದ ದೂರಮಾಡಲು ಅಶಕ್ತನಾದನು. ಆತನ ಹತ್ತಿರವಿದ್ದ ಆಸ್ತಿಯಾವತ್ತೂ ಮಾಯ ವಾಯಿತು. ಮಾವನ ಮನೆಯವರೂ ಆವ ನನ್ನು ತುಚ್ಛವಾಗಿ ಕಂಡರು. ಕಡೆಗೆ ಆತನು ಬೈರಾಗಿಗಳ ಗುಂಪಿನಲ್ಲಿ ಸೇರಿಹೋದನು.



# ಸೂರ್ಯ

ಆಕಾಶದಲ್ಲಿ ಪ್ರತಿರಾತ್ರಿಯೂ ನಾವು ನೋಡುವ ಅನಂತಕೋಟಿ ನಕ್ಷತ್ರಗಳಲ್ಲಿ ಸೂರ್ಯನೂ ಒಬ್ಬ. ಅಂದರೆ ನಕ್ಷತ್ರಗಳೆಂದರೆ ಬೇರೆ ಸೂರ್ಯರೆಂದೇ ಭಾವಿಸಬಹುದು. ಇತರ ನಕ್ಷತ್ರಗಳಿಗಿಂತ ನಮ್ಮ ಸೂರ್ಯ ನಮಗೆ ಹತ್ತಿರದಲ್ಲಿರುವುದರಿಂದ ಸೂರ್ಯಬಿಂಬವು ಹೆಚ್ಚು ಕಾಂತಿಯುಕ್ತವಾಗಿ ನಮಗೆ ಕಾಣಿಸುತ್ತದೆ. ಈ ಸೂರ್ಯ ಬಿಂಬವನ್ನು ಕುರಿತು ಕೆಲವು ವಿವರಗಳನ್ನು ಹೇಳುವೆವು :

* ಭೂಮಿ ಸೂರ್ಯನಿಗೆ ಹತ್ತಿರವಾದಾಗ ಎರಡರ ನಡುವೆ ೯ ಕೋಟಿ ೧೪ ಲಕ್ಷ ೬ ಸಾವಿರ ಮೈಲುಗಳಿರುತ್ತವೆ; ದೂರಹೋದಾಗ ೯ ಕೋಟಿ ೪೫ ಲಕ್ಷ, ೨೪ ಸಾವಿರ ಮೈಲುಗಳಾಗುತ್ತವೆ. ಒಂದು ಸೆಕೆಂಡಿನಲ್ಲಿ ೧,೮೬,೦೦೦ ಮೈಲು ವೇಗದಿಂದ ಓಡುವ ಬೆಳಕು ಸೂರ್ಯನಿಂದ ಭೂಮಿಯನ್ನು ಮುಟ್ಟಲು ಸುಮಾರು ೮ ನಿಮಿಷ ಹಿಡಿಯುತ್ತದೆ!

* ಸೂರ್ಯ ಬಿಂಬವು ಅಡ್ಡವಾಗಿ ೮,೬೭,೦೦೦ ಮೈಲುಗಳು. ಅದರ ಮೇಲುಭಾಗದ ವಿಶಾಲವು ಸುಮಾರು ೨೩೦ ಸಾವಿರಕೋಟಿ ಚದರಮೈಲು—ಅಂದರೆ: ಭೂಮಿಯ ವೈಶಾಲ್ಯಕ್ಕಿಂತ ೧೨ ಸಾವಿರ ಮಡಿ ಹೆಚ್ಚು!

* ಸೂರ್ಯನ ಘನಪರಿಮಾಣವು ೩೪೦೦ ಕೋಟಿ ಕೋಟಿಮೈಲು—ಭೂಮಿಗಿಂತ ೧೩ ಲಕ್ಷ ಮಡಿ ಹೆಚ್ಚು; ಭಾರವು ೨೦ ಲಕ್ಷ-ಕೋಟಿ-ಕೋಟಿ-ಕೋಟಿ ಟನ್ನುಗಳು! ಭೂಮಿಗಿಂತ ೩,೩೩,೦೦೦ ಮಡಿ. ಆದರೆ ಸೂರ್ಯನಲ್ಲಿರುವ ವಸ್ತುಗಳು ಭೂಮಿಯ ವಸ್ತುಗಳಿಗಿಂತ ಹಗುರ. ಎರಡನ್ನೂ ಸರಿಸಮವಾಗಿ ತೆಗೆದುಕೊಂಡು ತೂಕಮಾಡಿ ನೋಡಿದರೆ ಭೂಮಿಯ ಪದಾರ್ಥವು ನಾಲ್ಕು ಮಡಿ ಹೆಚ್ಚು ಭಾರವಿರುತ್ತದೆ.

* ಭೂಮಿಗಿರುವಂತೆ ಸೂರ್ಯನಿಗೂ ಗುರುತ್ವಾಕರ್ಷಣವಿದೆ. ಅದು ಭೂಮಿಗಿಂತ ಸುಮಾರು ೨೮ ಮಡಿ, ಅಂದರೆ ಇಲ್ಲಿಯ ಒಂದು ಮಣವು ಸೂರ್ಯಮಂಡಲದಲ್ಲಿ ೨೮ ಮಣಗಳು.

* ಭೂಮಿಯಂತೆ ಸೂರ್ಯಮಂಡಲವೂ ತನ್ನ ಸುತ್ತು ತಾನೇ ತಿರುಗುತ್ತದೆ. ಅದು ಒಮ್ಮೆ ಆತ್ಮ ಪ್ರದಕ್ಷಿಣೆಮಾಡಲು ೨೫ ದಿನ, ೭ ಗಂಟೆ, ೪೮ ನಿಮಿಷ ಹಿಡಿಯುತ್ತದೆ. ತಿರುಗುವ ವೇಗವು (ಮಧ್ಯರೇಖೆಯ ಬಳಿ) ಗಂಟೆಗೆ ೪,೪೦೭ ಮೈಲು.

* ಸೂರ್ಯಗೋಲದ ಮೇಲುಭಾಗದಲ್ಲಿ ಸುಮಾರು ೧೦,೦೦೦ ಡಿಗ್ರಿ ಉಷ್ಣವಿದೆ. ಸೂರ್ಯನ ಕಾಂತಿ ಒಂದುವರೆ ಕೋಟಿ-ಕೋಟಿ-ಕೋಟಿ ಕ್ಯಾಂಡಿಲುಗಳ ಕಾಂತಿಗೆ ಸಮ.

* ಸೂರ್ಯನು ಉರಿಯುವ ಒಂದು ಗೋಳ. ಇದರ ಉರಿ ಆಕಾಶದಮೇಲೆ ೨,೮೬,೦೦೦ ಮೈಲು ಎತ್ತರ ಏಳುತ್ತದೆ. ಭೂಮಿ-ಸೂರ್ಯರ ನಡುವೆ ಚಂದ್ರಬಿಂಬವು ಅಡ್ಡಬಂದು ಸೂರ್ಯಗ್ರಹಣ ಏರ್ಪಟ್ಟಾಗ, ಸೂರ್ಯಬಿಂಬವು ಚಂದ್ರಬಿಂಬದ ಹಿಂದೆ ಮರೆಯಾದಾಗ, ಈ ಅದ್ಭುತವಾದ ಜ್ವಾಲೆಗಳು ಸ್ಪಷ್ಟವಾಗಿ ಕಾಣಿಸುತ್ತವೆ. ಒಂದು ಸೂರ್ಯನ ಮಹಿಮೆಯೇ ಹೀಗಿರುವಾಗ, ಇಂತಹ ಅನೇಕ ಸೂರ್ಯರನ್ನು ಹುಟ್ಟಿಸಿದವನ ಮಹಿಮೆ ಎಷ್ಟೋ!

# ಮಾಯಾ ಚಕ್ರ (ಹಿಂಬದಿಯ ಚಿತ್ರಕಥೆ-೫)

"ಮಹಾರಾಣಿ, ಇಷ್ಟೊಂದಕ್ಕೆ ಹೀಗೆ ಪ್ರಾರ್ಥಿಸಬೇಕೆ? ಅಗತ್ಯವಾಗಿ ನನ್ನೊಂದಿಗೆ ನಿನ್ನನ್ನು ಕೆಂಪುಕೋಟೆಗೆ ಕರೆದೊಯ್ಯುತ್ತೇನೆ."

ರೆಕ್ಕೆಯ ಕುದುರೆ ಹೇಳಿದ ಈ ಮಾತನ್ನು ಕೇಳಿ ರಾಣಿಗೆ ಬಹಳ ಸಂತೋಷವಾಯಿತು. ಬೆಳಗಾಗುವವರೆಗೂ ಆ ಕುದುರೆ ಅಲ್ಲಿ ವಿಶ್ರಾಂತಿ ತೆಗೆದುಕೊಂಡಮೇಲೆ ಅವಳನ್ನು ಬೆನ್ನಮೇಲೇರಿಸಿಕೊಂಡು ಬಾನಬೀದಿಯಲ್ಲಿ ಹೊರಟಿತು.

ಕೆಳಗೆ ನೆಲದಲ್ಲಿ ಚಿತ್ರವಿಚಿತ್ರವಾದ ದೃಶ್ಯಗಳು ಕಾಣುತ್ತಿದ್ದುವು; ಬೇರೆ ಬೇರೆ ಊರುಗಳಮೇಲಿಂದ ಹಾರುತ್ತಿತ್ತು ಆ ಕುದುರೆ. ಗುಡ್ಡಗಳು ನದಿಗಳು, ನಗರಗಳು, ಉದ್ಯಾನಗಳು ಹೀಗೆ ಒಂದರಹಿಂದೊಂದಾಗಿ ಹಿಂದಾಗುತ್ತಿದ್ದುವು. ಮಧ್ಯಾಹ್ನವಾಯಿತು. ಕೆಳಗಿನ ಸುಂದರ ದೃಶ್ಯಗಳನ್ನು ನೋಡಿ ಸಂತೋಷಪಡುವ ಸ್ಥಿತಿಯಲ್ಲಿ ರಾಣಿ ಇರಲಿಲ್ಲ. ತನ್ನ ಪತಿಯನ್ನು ರಾಕ್ಷಸಿಯ ಸೆರೆಯಿಂದ ಬಿಡಿಸುವ ಬಗೆ ಹೇಗೋ ಎಂಬ ಚಿಂತೆಯಲ್ಲೇ ಇದ್ದಳು.

ಆಗ ಕೆಳಗೆ ಮಾಸಿದಬಟ್ಟೆಯ ಬಡವೆಯೊಬ್ಬಳು ಕಾಣಿಸಿದಳು. ಅವಳನ್ನು ನೋಡುತ್ತಲೇ ರಾಣಿಗೆ ತಟ್ಟನೆ ಒಂದು ಯೋಚನೆ ಹೊಳೆಯಿತು. ಅವಳು ಕುದುರೆಯನ್ನು ಕುರಿತು—"ಅಶ್ವರಾಜಾ, ಸ್ವಲ್ಪ ಆ ಹೆಂಗುಸಿನ ಬಳಿಗೆ ನನ್ನನ್ನು ಇಳಿಸು. ನನ್ನ ಈ ರಾಣಿವೇಷವನ್ನು ನೋಡಿದರೆ ಯಾರಾದರೂ ಏನೇನೋ ತಿಳಿದುಕೊಂಡಾರು. ನನ್ನ ಕೆಲಸ ಕೆಟ್ಟುಹೋದೀತು. ಅದಕ್ಕಾಗಿ ನಾನು ವೇಷವನ್ನು ಬದಲಾಯಿಸಿಕೊಳ್ಳುವುದು ಉಚಿತ. ಇದನ್ನೆಲ್ಲ ಆ ಬಡಹೆಂಗುಸಿಗೆ ಕೊಟ್ಟು ಅವಳ ಮಾಸಿದ ಬಟ್ಟೆಯನ್ನು ನಾನು ಉಟ್ಟುಕೊಳ್ಳುತ್ತೇನೆ" ಎಂದಳು.

ರೆಕ್ಕೆಯಕುದುರೆ ಅವಳನ್ನು ಕೆಳಗಿಳಿಸಿತು. ರಾಣಿ ಆ ಬಡವೆಯ ಬಳಿಗೆ ಹೋಗಿ ಅವಳಿಗೆ ತನ್ನ ವಸ್ತ್ರಾಲಂಕಾರಗಳನ್ನು ಕೊಟ್ಟು, ಅವಳ ಹಳೆಯ ಸೀರೆ ರವಿಕೆಗಳನ್ನೂ, ಹಳೆಯ ಗಾಜುಮಣಿಗಳ ಆಭರಣಗಳನ್ನೂ ತಾನು ಪಡೆದು ಧರಿಸಿಕೊಂಡಳು. ಆ ಬಡವೆಯ ಆಶೀರ್ವಾದವೂ ಅವಳಿಗೆ ಸಿಕ್ಕಿತು.

ನಂತರ ಮತ್ತೆ ಕುದುರೆಯನ್ನೇರಿ ಅವಳ ಆಕಾಶಪ್ರಯಾಣ ಸಾಗಿತು. ಹೋಗಿ ಹೋಗಿ–ದೂರದಲ್ಲಿ ಕೆಂಪುವನದ ಕೆಂಪುಕೋಟೆ ಕಾಣಿಸಿತು. "ಅಗೋ ಕೆಂಪುಕೋಟೆ ಬಂತು" ಎಂದಿತು ಕುದುರೆ. ರಾಣಿ ಬಹಳ ಕುತೂಹಲಗೊಂಡಳು. ಚುರುಕಾದಳು. ಮುಂದೆ ಹೇಗೋ ಏನೋ ಎಂದು ಯೋಚನೆ ಮಾಡುತ್ತಿದ್ದಳು. ಪತಿಯಿರುವ ಪ್ರದೇಶಕ್ಕೆ ಬಂದೆನೆಂಬ ಸಂತೋಷವೂ ಇತ್ತು.

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1955 ಮೇ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಮಾರ್ಚಿ 10 ನೇ ತಾರೀಕಿನೊಳಗೆ ನಮಗೆ ಬಂದು ತಲುಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು – 26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಸಜಹವಿದೇ ಚಂದ

ಎರಡನೇ ಫೋಟೋ: ಅಸಹಜವಿದು ಮಂದ

ಕಳಿಸಿದವರು: ಶ್ರೀಮತಿ ಯಶೋದಾ, ನಂ. 101,
ತಂಬುಚೆಟ್ಟಿ ಬೀದಿ, ಮದರಾಸು–1.

ಬಹುಮತಿ ರೂ. 10/–ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.



# ವಾರ್ತೆಗಳು-ವಿಶೇಷಗಳು

ಕಳೆದ ಜನವರಿಯಲ್ಲಿ ಮದರಾಸಿನ ಬಳಿ ಆವಡಿಯ "ಸತ್ಯಮೂರ್ತಿ ನಗರ"ದಲ್ಲಿ ೬೦ ನೆಯ ಅಖಿಲ ಭಾರತ ಕಾಂಗ್ರೆಸು ಮಹಾ ಸಭೆ ಸೇರಿದಾಗ ಪಂಡಿತ ಜವಹರಲಾಲ ನೆಹರೂ ಆ ಸಮಾವೇಶಕ್ಕೆ ಬಂದಿದ್ದರಷ್ಟೇ ? ಆ ಸಮಯದಲ್ಲಿ ಕೂಡಿದ ಜನರ ಉತ್ಸಾಹ, ಗದ್ದಲಗಳು ಪಂ. ನೆಹರುರವರಿಗೆ ಕೆಲವು ಬಾರಿ ಕೋಪ ಬರಿಸಿತ್ತು. ಒಮ್ಮೆ ಅವರು ಹಂಟುತಿದ್ದ ಸಹಭಾಗಿಗಳ ಮೇಲೆ ಬಿಸುಡಲು ಒಂದು ದಿಂಬನ್ನು ಎತ್ತಿಬಿಟ್ಟರು. ಆಗ ಕೊಯಂಬತೂರಿನ ಒಬ್ಬ ಪತ್ರಿಕಾ ಫೋಟೋಗ್ರಾಫರ್ ಅದೇ ಭಂಗಿಯಲ್ಲಿ ಅವರ ಫೋಟೋ ತೆಗೆದುಬಿಟ್ಟರು. ಅದನ್ನು ಅವರು ನೆಹರುರವರಿಗೆ ಕಳುಹಿಸಿಕೊಟ್ಟಾಗ ನೆಹರು ಅಚ್ಚರಿಪಟ್ಟರು. ಮೆಚ್ಚಿದರು. ಆ ಫೋಟೋಗ್ರಾಫರನ್ನು ಕರೆಸಿ, ಅವರಿಂದ ಅದರ ಅನೇಕ ಪ್ರತಿಗಳನ್ನು ಕೊಂಡುಕೊಂಡುದಲ್ಲದೆ, ತಮ್ಮ ಹಸ್ತಾಕ್ಷರ ಹಾಕಿದ ಒಂದು ಪ್ರತಿಯನ್ನು ಅವರಿಗೆ ಕೊಟ್ಟರು.

ಪೂನಾದಿಂದ ೧೨ ಮೈಲು ದೂರದಲ್ಲಿರುವ ಖಡಕ್‌ವಾಸಲಾ ಎಂಬಲ್ಲಿ ಸೈನಿಕಶಿಕ್ಷಣ ಕೇಂದ್ರದ ನಿರ್ಮಾಣ ಕಾರ್ಯವು ಸಾಗುತ್ತಾ ಇದೆ. ಅದರ ಶಂಕುಸ್ಥಾಪನೆ ಪಂ. ಜವಹರಲಾಲ ನೆಹರುರವರಿಂದ ೧೯೪೯ ಅಕ್ಟೋಬರ್ ೬ ರಂದು ಜರುಗಿತ್ತು. ಕಳೆದ ಜನವರಿ ತಿಂಗಳಲ್ಲಿ ಇದು ಮುಂಬಯಿರಾಜ್ಯದ ಪ್ರಧಾನರಾದ ಶ್ರೀ ಮುರಾರಜಿದೇಸಾಯಿಯವರಿಂದ ಉದ್ಘಾಟಿಸಲ್ಪಟ್ಟಿತು. ಈಗ ಅಲ್ಲಿ ಸುಮಾರು ೭೦೦ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದಾರೆ. ಈ ಶಿಕ್ಷಣಸಂಸ್ಥೆಯ ವಶದಲ್ಲಿ ೬೫೦೦ ಎಕರೆ ಭೂಮಿಯಿದೆಯೆಂದೂ, ಕೆಲವು ತಿಂಗಳಲ್ಲಿ ಎಲ್ಲಾ ಕಟ್ಟೋಣ ಕೆಲಸ ಪೂರ್ಣವಾಗುವುದೆಂದೂ, ಕಟ್ಟಡದ ವೆಚ್ಚವು ಏಳು ಕೋಟಿ ರೂಪಾಯಿಯಾಗುವುದೆಂದೂ ಲೆಕ್ಕಹಾಕಿದ್ದಾರೆ. ಈ ಪ್ರದೇಶವು ಸ್ವಾತಂತ್ರ್ಯವೀರ ಛತ್ರಪತಿ ಶಿವಾಜಿ ಮತ್ತು ಅವನ ಪರಿವಾರದವರು ನಡೆದಾಡಿದ ಸ್ಥಳ. ಇದು ಜಗತ್ತಿನಲ್ಲಿಯೇ ಒಂದನೇಸ್ಥಾನ ಪಡೆಯಬಲ್ಲ



ಸಂಸ್ಥೆಯಾಗಬಹುದೆಂದು ಊಹಿಸುತ್ತಾರೆ. ಈ ಸಂಸ್ಥೆಗೆ 'ನ್ಯಾಶನಲ್ ಡಿಫೆನ್ಸ್ ಅಕೆಡೆಮಿ' ಎಂಬ ಹೆಸರು ಕೊಡಲ್ಪಟ್ಟಿದೆ.

* * *

ಈಗ್ಗೆ ಮೂರು ವರ್ಷಗಳ ಹಿಂದೆ ಮದರಾಸಿಗೆ ಬಂದಿದ್ದ ಪ್ರೊ.ಫೆಸರ್ ಶ್ರೀ ಪಿ. ಸಿ. ಸರ್ಕಾರರು ಈ ವರ್ಷದ ಆದಿಯಲ್ಲಿ ಮತ್ತೆ ಮದರಾಸಿಗೆ ಬಂದು ತಮ್ಮ ಇಂದ್ರಜಾಲದಿಂದ ಮದರಾಸಿನ ಪ್ರಜೆಗಳನ್ನು ಆನಂದಗೊಳಿಸಿದರು. ಪ್ರಪಂಚ ಖ್ಯಾತಿಗಳಿಸಿದ ಅವರು ಚಂದಮಾಮ ಕಾರ್ಯಾಲಯಕ್ಕೂ ಬಂದು, ಚಂದಮಾಮನ ಓದುಗರಿಗೆಲ್ಲಾ ತಮ್ಮ ಅಭಿನಂದನೆಗಳನ್ನು ತಿಳಿಸಿದರು. ತಿಳಿಸುವಾಗ ಕೆಲವು 'ಟ್ರಿಕ್ಕು'ಗಳನ್ನು ಕೂಡ ಮಾಡಿ ತೋರಿಸಿದರು!

* * *

ಬೊಂಬಾಯಿ ಸರಕಾರವು, ಹರಿಜನಬಾಲರನ್ನು ತಮ್ಮ ಕುಟುಂಬದವರಂತೆ ಇಟ್ಟುಕೊಂಡು ಪೋಷಣೆ ಮಾಡುವವರಿಗೆ ಒಂದು ಮಗುವಿಗೆ ತಿಂಗಳಿಗೆ ೨೦ ರೂಪಾಯಿಯಂತೆ ಕೊಡಲು ನಿರ್ಧರಿಸಿದೆ.

* * *

ನವದೆಹಲಿಯಲ್ಲಿ ಕೋತಿಗಳು ಬಹಳ ಹಾವಳಿ ಮಾಡುತ್ತಿವೆಯಂತೆ. ಮುಖ್ಯವಾಗಿ ಸರಕಾರೀ ಕಛೇರಿಗಳಿಗೆ ನುಗ್ಗಿ ಕಾಗದ ಪತ್ರಗಳಮೇಲೆ ದಾಳಿ ನಡೆಸಿ ಕೀಟಲೆ ಮಾಡುತ್ತಿವೆಯಂತೆ. ಬಂದೋಬಸ್ತುಗಳು ನಡೆದಿವೆ.

* * *

ದಿವಂಗತ ಕಿದ್ವಾಯಿಯವರ ಸ್ಮಾರಕಕ್ಕಾಗಿ ಪಂಡಿತ ನೆಹರೂರವರು ಹಣ ಸಂಗ್ರಹ ಮಾಡುತಿದ್ದಾರೆ. ಆ ಹಣದಿಂದ ವಿದ್ಯಾರ್ಥಿಗಳಿಗೆ ಶಿಷ್ಯವೃತ್ತಿ, ಸ್ವಾತಂತ್ರ್ಯವೀರರಿಗೆ ಸಹಾಯ, ಮತ್ತು ಕಿದ್ವಾಯಿಯವರ ಮಸೌಲಿಹಳ್ಳಿಯ ಅಭಿವೃದ್ಧಿ ಇವುಗಳನ್ನು ಸಾಧಿಸುತ್ತಾರಂತೆ.

* * *

ಪಾಂಡಿಚೇರಿ ಸರಕಾರವು ತನ್ನ ಧ್ವಜವನ್ನು ಆರಿಸಿಕೊಂಡಿದೆ. ಅದು ಸಮುದ್ರದ ಹಿನ್ನೆಲೆಯಲ್ಲಿ ಉದಯಹೊಂದುವ ಸೂರ್ಯ, ಮತ್ತು ಎರಡು ಕಂಬಗಳ ನಡುವೆ ಅಶೋಕ ಚಕ್ರ ಈ ಚಿಹ್ನೆಗಳಿಂದ ಕೂಡಿದೆ.

* * *

ಬೊಂಬಾಯಿ ರಾಷ್ಟ್ರದ 'ಪಕಾಶ' ಎಂಬ ಗ್ರಾಮದ ಬಳಿ ೩,೦೦೦ ವರ್ಷಗಳ ಹಿಂದಿನ ಪಟ್ಟಣವೊಂದು ಕಂಡುಹಿಡಿಯಲ್ಪಟ್ಟಿದೆ. ಇದು ತಪತೀನದೀತೀರದಲ್ಲಿ ಕಂಡುಹಿಡಿದ ಅತಿಪ್ರಾಚೀನ ನಾಗರಿಕತೆಯ ಚಿಹ್ನಗಳಲ್ಲಿ ಮೊದಲನೆಯದಾಗಿದೆ.



## ಚಿತ್ರ ಕಥೆ



ವಾಸುಗೆ ಅವನ ಹುಟ್ಟು ಹಬ್ಬಕ್ಕೆ, ಒಂದು ಹೊಸ ಬಹುಮಾನ ಸಿಕ್ಕಿತು: ಅದೊಂದು ಕ್ಯಾಮೆರಾ. ಅದರಿಂದ ಒಳ್ಳೆಯ ಫೋಟೋ ಹಿಡಿಯಬೇಕೆಂದುಕೊಂಡ. ಗೋಪಿ, ಟೈಗರ್ ಜೊತೆಗಾರರೊಡನೆ ಹೊರಟ. ಅವರು ಯಾರದೋ ತೋಟಕ್ಕೆ ಹೊಕ್ಕರು. ಮಾವಿನ ಮರದಲ್ಲಿರುವ ಒಂದು ಹಕ್ಕಿಯ ಗೂಡು ನೋಡಿದರು.



"ಈ ಪಕ್ಷಿಯ ಗೂಡನ್ನೂ, ಅದರೊಳಗಿನ ಮರಿಗಳನ್ನೂ ಫೋಟೋ ಹಿಡಿದು ಬಿಡ್ತೇನೆ" ಎಂದು ವಾಸು ಮರದಮೇಲೇರಿದ. ಆಗ ತಾಯಿ ಹಕ್ಕಿ ಇದನ್ನ ನೋಡಿ ಸುಮ್ಮನಿದ್ದೀತೆ? ನೋಡಿ ಅದು ಏನು ಮಾಡಿತೆಂದು...! ಬಿದ್ದುಬಿಟ್ಟ ವಾಸು! ಈಸದ್ದಿಗೆ ತೋಟಗಾರ "ಕಳ್ಳರೇ—" ಎಂದು ಓಡಿ ಬರುತ್ತಿದ್ದಾನೆ!! ಈ ತುಂಟರೂ ಪಲಾಯನ!

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26. Controlling Editor: SRI 'CHAKRAPANI'

Photo by P. K. Patel



ಬಹುಮಾನ
ಪಡೆದಶೀರ್ಷಿಕೆ

ಅಸಹಜವಿದು ಮಂದ

ಕಳಿಸಿದವರು :
ಶ್ರೀಮತಿ ಯಶೋದಾ

